TRAVEL PAGE

# ಪ್ರವಾಸ 2015

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

### ಅಮರನಾಥ್ - ವೈಷ್ಣವಿ ದೇವಿ : 19 ದಿನಗಳು

June 29

ಅಮರನಾಥ್, ವೈಷ್ಣವಿ ದೇವಿ, ಶ್ರೀನಗರ, ಕುರುಕ್ಷೇತ್ರ, ವಾಘಾ ಬಾರ್ಡರ್, ಅಮೃತ್‌ಸರ್, ದೆಹಲಿ

### ಚಾರೋಧಾಮ್ - ಕಾಶಿ - ಗಯಾ : 19/26 ದಿನಗಳು

Sep 18 Oct 04

ಹರಿದ್ವಾರ, ಯಮುನೋತ್ರಿ, ಗಂಗೋತ್ರಿ, ಉತ್ತರಕಾಶಿ, ಕೇದಾರ, ತ್ರಿಯುಗಿ (Optional), ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿ, ಋಷಿಕೇಶ್, ನವದೆಹಲಿ, ಅಲಹಾಬಾದ್, ಅಯೋಧ್ಯಾ, ಸಾರಾನಾಥ್, ಗಯಾ, ಬುದ್ದಗಯಾ, ಕಾಶಿ

### ದ್ವಾರಕ ಮತ್ತು ಜ್ಯೋತಿರ್ಲಿಂಗ : 24 ದಿನಗಳು

Oct 25 Nov 15

ಪುಷ್ಕರ, ಅಜ್ಮೀರ್, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಎಲ್ಲೋರ, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್.

### ಶಕ್ತಿಪೀಠ ಮನಾಲಿ ಸ್ಪೆಷಲ್ : 18 ದಿನಗಳು

Sep 24 Oct 25

ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ವೈಷ್ಣವೀದೇವಿ, ಚಾಮುಂಡ, ಖಾಂಘ್ರಾ, ಚಿಂತಪೂರ್ಣಿ, ಜ್ವಾಲಾಮುಖಿ, ಬೈಜ್‌ನಾಥ್, ಕುಲು-ಮನಾಲಿ, ವಶಿಷ್ಠ, ರೋತಾಂಗ್ ಪಾಸ್ (Optional), ನೈನಾದೇವಿ, ಕುಫ್ರಿ, ಸಿಮ್ಲಾ, ಚಂಡೀಘರ್, ಕುರುಕ್ಷೇತ್ರ, ನವದೆಹಲಿ

### ಕೋಲ್ಕತ್ತಾ - ಡಾರ್ಜಿಲಿಂಗ್ : 16 ದಿನಗಳು

Sep 22 Nov 18

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್




ಶ್ರೀ ಹನ್ಸಾ ಟ್ರಾವೆಲ್ಸ್

**SHRI HANSAA TRAVELS**

RECOGNISED BY DEPARTMENT OF TOURISM, GOVT. OF KARNATAKA

No. 640, 40th Cross (Near Prabha Eye Clinic), 8th Block, Jayanagar, Bangalore - 560 070.

☎: (080) 26543891 / 26643276 Mobile : (0) 9341415612 / 9341215612

e-mail : hansaatravels@gmail.com web : www.hansaatravels.com

ಜೂನ್-2015 ಸಂಪುಟ 16 ಸಂಚಿಕೆ 06



# ವಿವೇಕ ಪ್ರಭ

ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಮುಕ್ತಿದಾನಂದ
ಸಂಪಾದಕರು
ಸ್ವಾಮಿ ಜ್ಞಾನಯೋಗಾನಂದ
ನೆರವು:
ಆರ್. ಎಸ್. ಪೂರ್ಣಾನಂದ
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail:
vivekaprabha@hotmail.com
kannada.vivekaprabha@gmail.com
Website: vivekaprabha.net
ಫೋನ್ : 9481533505

ಮುಖಪುಟ:
ಧ್ಯಾನಮಗ್ನ ಸಾಧು

## ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

## ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ): ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-ಜಿ ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

## ಪರಿವಿಡಿ

5 ಪ್ರಾರ್ಥನೆ – ಅನ್ನಪೂರ್ಣಾ ಸ್ತೋತ್ರರತ್ನಮ್ ಸೂಕ್ತಿಪ್ರಭ
7 ಸಂಪಾದಕೀಯ: ಒಬ್ಬ ಸಾಧುವಿನ ಕಥೆ
10 ಶ್ರೀರಾಮಕೃಷ್ಣ ವಚನವೇದದಿಂದ: ಅಹಂಕಾರ
21 ಕೈಲಾಸ ಮಾನಸ ಸರೋವರ ಯಾತ್ರೆ — ಸ್ವಾಮಿ ದಾಮೋದರಾನಂದ
25 ಯುವಚೇತನ
30 ಆಧ್ಯಾತ್ಮಿಕ ಸಂಭಾಷಣೆ : ಸ್ವಾಮಿ ಭೂತೇಶಾನಂದಜಿಯವರೊಂದಿಗೆ
33 ಜಪಾನಿನ ನೀತಿಕಥೆಗಳು : ಸೋಮಾರಿ ಹುಡುಗನ ಕಥೆ — ರಾಜಕೃಷ್ಣ ಭಟ್ಟಾಚಾರ್ಯ
37 ಪುಸ್ತಕ ಪರಿಚಯ: ಸೌಂದರ್ಯಲಹರೀ
42 ಸುದ್ದಿ ಸಂಚಯ

11 ವಿಶೇಷ ಲೇಖನ
ಶ್ರೀರಾಮಕೃಷ್ಣರ ಬೋಧನೆಯ ಬೆಳಕಿನಲ್ಲಿ ಅಷ್ಟಾವಕ್ರ ಸಂಹಿತೆ
ಸ್ವಾಮಿ ಪರಹಿತಾನಂದ

26 ವಿಶೇಷ ಲೇಖನ
ಅಸತೋ ಮಾ ಸದ್ಗಮಯ...
ಸ್ವಾಮಿ ಧರ್ಮವ್ರತಾನಂದ





17 ಧಾರಾವಾಹಿ
ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ – ಭಾಗ 8
ಸ್ವಾಮಿ ನಿರಾಮಯಾನಂದ

34 ಯೋಗವಾಸಿಷ್ಠದ ಕಥೆಗಳು:
ಕಥಾಗುಚ್ಛ 4
ಕರ್ಕಟಿಯ ಕಥೆ
ಸ್ವಾಮಿ ವೀರೇಶಾನಂದ

ಕರ್ಕಟಿ ಹಿಮಾಲಯದ ಉತ್ತುಂಗ ಶಿಖರವನ್ನೇರಿದಳು; ಘೋರವಾದ ತಪಸ್ಸನ್ನು ಆಚರಿಸತೊಡಗಿದಳು....



38 ಚಿತ್ರಕಥೆ:
ಪಾಂಡುರಂಗನ ಭಕ್ತೆ ಗೋಮಾಬಾಯಿ

# ಅನ್ನಪೂರ್ಣಾ ಸ್ತೋತ್ರರತ್ನಮ್



ಭಗವತಿ ಭವರೋಗಾತ್ಪೀಡಿತಂ ದುಷ್ಕೃತೋತ್ಥಾತ್
ಸುತದುಹಿತೃ ಕಲತ್ರೋಽಪದ್ರವೇಣಾನುಯಾಂತಮ್ ।
ವಿಲಸದಮೃತದೃಷ್ಟ್ಯಾ ವೀಕ್ಷ ವಿಭ್ರಾಂತ ಚಿತ್ತಂ
ಸಕಲಭುವನ ಮಾತಃ ತ್ರಾಹಿ ಮಾಮೋಂ ನಮಸ್ತೇ ॥

ಭಗವತಿ, ಜಗನ್ಮಾತೆ, ದುಷ್ಕೃತ್ಯಗಳಿಂದ ಜನ್ಮ ತಾಳಿದವನನ್ನು, ಸಂಸಾರರೂಪೀ ರೋಗದಿಂದ ಪೀಡಿತನಾದವನನ್ನು, ಮಗ–ಮಗಳು–ಹೆಂಡತಿ ಇವರ ಉಪದ್ರವಕ್ಕೀಡಾದವನನ್ನು, ಭ್ರಾಂತಿಚಿತ್ತವುಳ್ಳವನನ್ನು, ಶೋಭಾಯಮಾನವಾದ ಅಮೃತ ದೃಷ್ಟಿಯಿಂದ ನೋಡು, ನಮಸ್ಕರಿಸುತ್ತೇನೆ. ॥೧॥

ಮಾಹೇಶ್ವರೀ ಮಾಶ್ರಿತಕಲ್ಪವಲ್ಲೀ
ಮಹಂ ಭವೋಚ್ಛೇದಕರೀಂ ಭವಾನೀಮ್ ।
ಕ್ಷುಧಾರ್ತ ಜಾಯಾ ತನಯಾದ್ಯುಪೇತ
ಸ್ತ್ವಾ ಮನ್ನಪೂರ್ಣೇ ಶರಣಂ ಪ್ರಪದ್ಯೇ ॥

ಅನ್ನಪೂರ್ಣೇ, ನೀನು ಮಹೇಶ್ವರನ ಅರ್ಧಾಂಗಿ, ಆಶ್ರಯಿಸಿದವರಿಗೆ ಕಲ್ಪವೃಕ್ಷಳು, ಸಂಸಾರವನ್ನು ಕತ್ತರಿಸುವ ಭವಾನಿ, ಹಸಿವಿನಿಂದ ಪೀಡಿತರಾದ ಸತಿಸುತರಿಂದ ಕೂಡಿ (ಸಂಸಾರದಲ್ಲಿ ಒದ್ದಾಡುವ ಭಕ್ತರನ್ನುದ್ದೇಶಿಸಿ), ನಾನು ನಿನಗೆ ಶರಣು ಬಂದಿರುವೆನು. ॥೨॥

ದಾರಿದ್ರ್ಯ ದಾವಾನಲ ದಹ್ಯಮಾನಂ
ಪಾಹ್ಯನ್ನಪೂರ್ಣೇ ಗಿರಿರಾಜ ಕನ್ಯೇ ।
ಕೃಪಾಂಬುದೌ ಮಜ್ಜನ ಮಾಂ ತ್ವದೀಯೇ
ತ್ವತ್ಪಾದಪದ್ಮಾರ್ಪಿತ ಚಿತ್ತವೃತ್ತಿಮ್ ॥

ಗಿರಿರಾಜಕನ್ಯೆ, ದಾರಿದ್ರ್ಯದ ಕಾಡ್ಗಿಚ್ಚಿನಿಂದ ಸುಟ್ಟು ಹೋಗುತ್ತಿರುವ ನನ್ನನ್ನು ರಕ್ಷಿಸು. ನಿನ್ನ ಚರಣಕಮಲದಲ್ಲಿ ಚಿತ್ತವನ್ನು ಅರ್ಪಿಸಿರುವ ನನ್ನನ್ನು ನಿನ್ನ ಕೃಪಾಸಾಗರದಲ್ಲಿ ಮುಳುಗಿಸು. ॥೩॥

# ಸೂಕ್ತಿಪ್ರಭ

ಎಲ್ಲರಲ್ಲೂ ದೇವರಿದ್ದಾನೆಂದೇ
ನಾನು ಜನರ ಬಳಿಗೆ ಹೋಗುವೆ.
ಅವರು ಒಂದೇ ದೇಹದ ವಿವಿಧ
ಅಂಗಗಳಂತೆ. ಅವರಲ್ಲಿ
ಭೇದವನ್ನು ಕಾಣುವುದು
ಅಪವಿತ್ರವಾದ ಭ್ರಾಂತಿ.

–ತುಕಾರಾಮ



ಭಗವಂತನ ಅಪಾರ ಕಾರುಣ್ಯಾದಿಗಳನ್ನು ಸ್ಮರಿಸಿಕೊಂಡು ಕರಗಿಹೋದ ಚಿತ್ತವೃತ್ತಿಯು ಆತನಲ್ಲಿಯೇ ಧಾರಾಕಾರವಾಗಿ ಹರಿಯುತ್ತಿದ್ದರೆ, ಆ ಚಿತ್ತವೃತ್ತಿಯು ಭಕ್ತಿ ಎನಿಸಿಕೊಳ್ಳುತ್ತದೆ.

–ಭಕ್ತಿರಸಾಯನ

ಪ್ರೀತಿ ಮತ್ತು ದೇವರು ಇವೆರಡೂ ಬೇರೆ ಬೇರೆ ಎಂದು ಅಜ್ಞಾನಿಗಳು ಹೇಳುತ್ತಾರೆ. ಪ್ರೀತಿಯೇ ದೇವರೆಂದು ಯಾರೂ ತಿಳಿದಿಲ್ಲ. ಯಾರಿಗೆ ಪ್ರೀತಿಯೇ ದೇವರೆಂದು ತಿಳಿದಿದೆಯೊ, ಅವರು ಪ್ರೀತಿಯಲ್ಲಿ ವಿರಮಿಸುವರು, ದೇವರಲ್ಲಿ ಒಂದಾಗುವರು.

–ತಿರುಮಲರ್



ನಿಂದಕರಿರಬೇಕು,
ಹಂದಿಯಿದ್ದರೆ ಕೇರಿ ಹ್ಯಾಂಗೆ
ಶುದ್ಧಿಯೋ ಹಾಂಗೆ,
ದುರುಳ ಜನಂಗಳು
ಚಿರಕಾಲವಿರುವಂತೆ
ಕರವ ಮುಗಿದು ಬೇಡುವೆನು,
ಪರಿಪರಿ ತಮಸಿಗೆ ಗುರಿಯಹರಲ್ಲದೆ
ಪರಮ ದಯಾನಿಧೆ, ಪುರಂದರ ವಿಠಲ !

–ಪುರಂದರದಾಸರು

ಎಲ್ಲ ಕಲೆಗಳ ಕಲೆ, ಅಭಿವ್ಯಕ್ತಿಯಲ್ಲಿನ
ಭವ್ಯತೆ ಹಾಗೂ ಅಕ್ಷರಗಳ ಬೆಳಕಿನ
ಪ್ರಭೆಯೆಂದರೆ – ಸರಳತೆ.

–ವಾಲ್ಟ್ ವಿಟ್‌ಮನ್



# ವಿವೇಕಪ್ರಭ

**ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ**

**ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020**



**ಚಂದಾ ಅರ್ಜಿ**

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು...........................................................................

ವಿಳಾಸ.................................................................................

..........................................................................................

...................................................ಪಿನ್...........................

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು..................................................................................

ವಿಳಾಸ.................................................................................

..........................................................................................

...................................................ಪಿನ್...........................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

**ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.**

ವಿವರ.......................................................................

1. ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ

## ಓದುಗರ ಓಲೆ

ಭಕ್ತನ ಬದುಕು ಹೇಗಿರುತ್ತದೆ, ಹೇಗಿರಬೇಕು – ಎಂಬುದನ್ನು ಐದು ಕಂತುಗಳಲ್ಲಿ ಹರಿದು ಬಂದ ಸ್ವಾಮಿ ನಿತ್ಯಸ್ಥಾನಂದರ 'ಭಕ್ತನ ಲಕ್ಷಣ' ಆಧ್ಯಾತ್ಮಿಕ ಲೇಖನ ಸವಿಸ್ತಾರವಾಗಿ ತಿಳಿಸಿತು.

ಭಗವದ್ಗೀತೆಯ ದೃಷ್ಟಿಯಲ್ಲಿ ಭಕ್ತನ ಲಕ್ಷಣಗಳನ್ನು ಹೇಳುವ ಮೂಲಕ, ಇಂದಿನ ಅನೇಕ ದೃಷ್ಟಾಂತಗಳಿಂದ ಆತನ ಗುಣಲಕ್ಷಣಗಳನ್ನು ಆಪ್ಯಾಯಮಾನಗೊಳಿಸಿರುವುದು ನಿಜಕ್ಕೂ ಚೇತೋಹಾರಿಯಾಗಿದೆ. ಆಡಂಬರದ ಪೂಜೆ–ಪುನಸ್ಕಾರ, ವೇಷಭೂಷಣಗಳಿಂದ ಎಂದೂ 'ಭಕ್ತ' ಎನ್ನಿಸಿಕೊಳ್ಳಲಾಗುವುದಿಲ್ಲ ಎಂದು ಹೇಳುತ್ತಾ, ಆತ ಎಂದೆಂದಿಗೂ ನಿರ್ಲಿಪ್ತ, ಒತ್ತಡಗಳಿಲ್ಲದವನು, ಅವನಿಗೆ ಶುಭಾಶುಭಗಳೆಂಬುದಿಲ್ಲ; ಜೊತೆಗೆ ಆತ ನಿಜಕ್ಕೂ ಅನಿಕೇತ, ದಿವ್ಯಮೌನಿ, ಸ್ಥಿರ ಮನಸ್ಸುಳ್ಳವನು–ಎಂಬುದನ್ನೆಲ್ಲ ಸೋದಾಹರಣವಾಗಿ ವಿವರಿಸುವ ಮೂಲಕ ಸ್ವಾಮೀಜಿಯವರು ಲೇಖನಕ್ಕೆ ನೈಜಸ್ಪರ್ಶ ನೀಡುತ್ತಾರೆ. ಹೀಗೆ ಈ ಲೇಖನ ನಿಜಭಕ್ತರೆಲ್ಲರಿಗೂ ದಾರಿದೀಪವಾಗಿದೆ. ವಂದನೆಗಳು.

*–ಶಂಕರೇಗೌಡ, ತುಂಬಕೆರೆ, ಮಂಡ್ಯ*

**ನಿನ್ನಲ್ಲಿರುವ ದೇವರೇ ಎಲ್ಲರಲ್ಲಿರುವ ದೇವರೂ ಆಗಿರುವನು. ನಿನಗೆ ಇದು ತಿಳಿಯದೆ ಇದ್ದರೆ ಏನೂ ತಿಳಿದಿಲ್ಲ. ವ್ಯತ್ಯಾಸ ಇರಲು ಹೇಗೆ ಸಾಧ್ಯ? ಎಲ್ಲವೂ ಒಂದೇ. ಪ್ರತಿಯೊಬ್ಬರೂ ಪರಮಾತ್ಮನ ದೇವಾಲಯವೆ. ನೀವು ಇದನ್ನು ಮನಗಂಡರೆ ಒಳ್ಳೆಯದು. ಇಲ್ಲದೇ ಇದ್ದರೆ ಆಧ್ಯಾತ್ಮಿಕ ಜೀವನ ನಿಮಗೆ ಇನ್ನೂ ಆರಂಭವಾಗಿಲ್ಲ.**

**–ಸ್ವಾಮಿ ವಿವೇಕಾನಂದ**



ಸಂಪಾದಕೀಯ

# ಒಬ್ಬ ಸಾಧುವಿನ ಕಥೆ

ಶ್ರೀರಾಮಕೃಷ್ಣರು ಒಬ್ಬ ಸಾಧುವಿನ ಬಗ್ಗೆ ಹೇಳುತ್ತಾರೆ. ಅವನು ಜ್ಞಾನೋನ್ಮತ್ತನಾಗಿದ್ದ; ಪಿಶಾಚಿಯಂತಿದ್ದ. ನಗ್ನನಾಗಿದ್ದ ಅವನ ತಲೆ, ಮೈಮೇಲೆಲ್ಲ ಧೂಳು; ಉದ್ದವಾದ ಉಗುರುಗಳು. ಮೈಮೇಲೆ ಜೋತಾಡುತ್ತಿದ್ದ ಒಂದು ಕಂಥೆ. ದಕ್ಷಿಣೇಶ್ವರದ ಕಾಳೀಮಂದಿರಕ್ಕೆ ಬಂದ ಅವನು ಜಗನ್ಮಾತೆಯ ಮುಂದೆ ನಿಂತು ದೇವೀಸ್ತೋತ್ರವನ್ನು ಪಠಿಸಿದ. ಕಾಳೀಮಾತೆ ಪ್ರಸನ್ನಳಾದಳೋ ಎಂಬಂತೆ ಮಂದಿರವೆಲ್ಲ ಅಲುಗಾಡಿತಂತೆ! ಅನಂತರ ಅವನು ಬಡಬಗ್ಗರಿಗೆ ಪ್ರಸಾದ ನೀಡುತ್ತಿದ್ದ ಸ್ಥಳಕ್ಕೆ ಹೋಗಿ ಕುಳಿತುಕೊಂಡ. ಅವನನ್ನು ಅಲ್ಲಿಂದಲೂ ಓಡಿಸಿಬಿಟ್ಟರು. ಜನರೆಲ್ಲ ಪ್ರಸಾದ ತಿಂದು, ಎಂಜಲೆಲೆ ಬಿಸಾಡಿದ ಸ್ಥಳಕ್ಕೆ ಹೋದ ಸಾಧು, ಅಲ್ಲಿ ನಾಯಿಗಳೊಂದಿಗೆ ಎಂಜಲನ್ನವನ್ನು ತಿನ್ನತೊಡಗಿದ. ನಾಯಿಯ ಕೊರಳ ಮೇಲೆ ಒಂದು ಕೈಯನ್ನಿಟ್ಟ, ಇನ್ನೊಂದು ಕೈಯಿಂದ ಎಂಜಲನ್ನವನ್ನು ಆರಿಸಿ ತಿನ್ನುತ್ತಿದ್ದ. ನಾಯಿ ತನ್ನ ಕೊರಳ ಮೇಲೆ ಕೈಯಿಟ್ಟ ವ್ಯಕ್ತಿಗೆ ಹೆದರಿ ಓಡಲಿಲ್ಲ; ಅದೂ ಎಂಜಲನ್ನವನ್ನು ತಿನ್ನುತ್ತಿತ್ತು.

ಅದನ್ನು ನೋಡಿದ ಶ್ರೀರಾಮಕೃಷ್ಣರು, ತನಗೂ ಅಂತಹದೇ ಅವಸ್ಥೆ ಬಂದೊದಗಿ, ತಾನೂ ಅವನಂತೆ ತಿರುಗಾಡಬೇಕಾದೀತೇ ಎಂದು ಗಾಬರಿಗೊಂಡರಂತೆ. ಅವನನ್ನು ಕಂಡು ಅವರು ತಮ್ಮ ಅಳಿಯ ಹೃದಯನಿಗೆ, 'ಅವನು ಹುಚ್ಚನಲ್ಲ, ಅವನು ಜ್ಞಾನೋನ್ಮತ್ತನಾದ ಸಾಧು' ಎಂದರು. ಅದನ್ನು ಕೇಳಿದ ಹೃದಯ ಆತನನ್ನು ನೋಡಲು ಹೋದ. ಆಗಲೆ ಆತ ತೋಟದಿಂದ ಹೊರಗೆ ಹೋಗಿದ್ದ. ಅವನಲ್ಲಿ ಹೃದಯ ಕೇಳಿಕೊಂಡ, ''ಮಹಾರಾಜ್, ಈಶ್ವರನ್ನು ಪಡೆಯುವುದು ಹೇಗೆ?'' ಮೊದಮೊದಲು ಅವನು ಉತ್ತರವನ್ನೇ ಕೊಡಲಿಲ್ಲ. ಅವನೊಂದಿಗೆ ಹೃದಯ ತುಸುದೂರ ನಡೆದ. ಆಗ ದಾರಿಯ ಪಕ್ಕದಲ್ಲಿದ್ದ ಚರಂಡಿಯನ್ನು ತೋರಿಸಿ ಆ ಸಾಧು, ''ಈ ಚರಂಡಿಯ ನೀರೂ ಗಂಗಾನದಿಯ ನೀರೂ ಒಂದೇ ಎಂದು ತಿಳಿದಾಗ ನೀನು ಈಶ್ವರನನ್ನು ಪಡೆಯುವೆ'' ಎಂದ. ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಎಂದು ಹೃದಯ ಆ ಸಾಧುವನ್ನು ಕೇಳಿಕೊಂಡ. ಅದಕ್ಕೆ ಅವನು ಏನೂ ಉತ್ತರಿಸಲಿಲ್ಲ. ಹೃದಯ ಅವನನ್ನೇ ಹಿಂಬಾಲಿಸಿ ಹೋದ. ಆಗ ಕೋಪದಿಂದ ಸಾಧು ಕಲ್ಲೆತ್ತಿ ಹೊಡೆಯಲು ನೋಡಿದ. ಹೃದಯ ಪಲಾಯನ ಮಾಡಿದ. ಮರಳಿ ಅವನತ್ತ ನೋಡಿದಾಗ, ಆತ ಎಲ್ಲೋ ಮಾಯವಾಗಿದ್ದ.

ಅವನದು ಪರಮಹಂಸಾವಸ್ಥೆ ಎಂದು ಶ್ರೀರಾಮಕೃಷ್ಣರು ಅನಂತರ ಹೃದಯನಿಗೆ ಹೇಳಿದರು. ಪರಮಹಂಸರು ಬಾಲಕರಂತೆ, ಪಿಶಾಚಿಯಂತೆ, ಹುಚ್ಚನಂತೆ, ಸಂಸಾರದಲ್ಲಿ ಅಲೆದಾಡುತ್ತಾರೆಂದು ಕೆಲವು ಶಾಸ್ತ್ರಗ್ರಂಥಗಳಲ್ಲಿ ಹೇಳಿದೆ. ಈ ಸಾಧು ಅಂತಹ ಒಬ್ಬ ವ್ಯಕ್ತಿಯಾಗಿ ಕಂಡುಬರುತ್ತಾನೆ. ಜನ ಪೀಡಿಸುತ್ತಾರೆಂದು ಅವರು ಹೀಗೆ ಅಲೆದಾಡುವರೆಂದೂ, ಜನರ ಕಣ್ಣಿನಿಂದ ಮರೆಯಾಗಿರಲು ಅವರು ಈ ರೀತಿ ವರ್ತಿಸುವರೆಂದೂ ಹೇಳಲಾಗುತ್ತದೆ. ಈ ಸಾಧುವಿನ ಕಥೆ ನಮ್ಮಲ್ಲಿ ಅನೇಕ ಭಾವನೆಗಳನ್ನು ಹುಟ್ಟಿಸಬಹುದು. ಇಂಥವರ ಅವಸ್ಥೆಯನ್ನು ಅರ್ಥಮಾಡಿಕೊಳ್ಳುವುದು ಹೇಗೆ ಎಂದು ತುಸು ಆಲೋಚಿಸೋಣ.

ಮೇಲಿನ ಘಟನೆಯಲ್ಲಿ ಕಂಡುಬರುವಂತೆ, ಆ ಸಾಧು ಅತ್ಯಂತ ಉನ್ನತವಾದ ಅವಸ್ಥೆಯನ್ನು ಹೊಂದಿದ್ದ. ಅದನ್ನು ಶ್ರೀರಾಮಕೃಷ್ಣರು 'ಪರಮಹಂಸಾವಸ್ಥೆ' ಎಂದು ಬಣ್ಣಿಸಿದರು. ಆ ಸಾಧುವಿನ ಲಕ್ಷಣಗಳನ್ನು ಗಮನಿಸಿದರೆ ಅದನ್ನು ಅವಧೂತನ ಲಕ್ಷಣವೆಂದೂ, ಜೀವನ್ಮುಕ್ತನ ಲಕ್ಷಣವೆಂದೂ ತಿಳಿದುಕೊಳ್ಳಬಹುದು. ಯಾರು ಈ ಅದ್ಭುತ ಅವಸ್ಥೆಯನ್ನು ಹೊಂದಿದ್ದಾರೋ, ಅವರ ಪಾಲಿಗೆ ಪ್ರಪಂಚ ಇಲ್ಲವಾದಂತೆ. ಸದಾ ಬ್ರಹ್ಮಾನುಭವದಲ್ಲಿದ್ದುಕೊಂಡು, ಎಲ್ಲ ಜಗದ್ವ್ಯಾಪಾರಗಳಲ್ಲಿ, ಎಲ್ಲ ಪ್ರಾಪಂಚಿಕ ವಸ್ತುಗಳಲ್ಲಿ ಅವರು ಅನಾಸಕ್ತರಾಗಿರುತ್ತಾರೆ. ನಿರಂತರ ಬ್ರಹ್ಮಾನಂದವನ್ನು ಅನುಭವಿಸುತ್ತಿರುವುದರಿಂದ ಹುಚ್ಚನಂತೆ ವರ್ತಿಸುತ್ತಲೂ, ಉನ್ಮತ್ತನಂತೆ ನರ್ತಿಸುತ್ತಲೂ ಇರುತ್ತಾರೆ. ಅವರಲ್ಲಿ ಯಾವುದೇ ದ್ವಂದ್ವಗಳಿಲ್ಲ, ಏರುಪೇರುಗಳಿಲ್ಲ, ಗುಣಧರ್ಮಗಳಿಲ್ಲ. ಆದ್ದರಿಂದ ಅವರಿಗೆ ಹವಿಷ್ಯಾನ್ನವೂ ಒಂದೆ, ಪ್ರಸಾದವೂ ಒಂದೆ, ಎಂಜಲನ್ನವೂ ಒಂದೆ. 'ಚರಂಡಿಯ ನೀರೂ ಗಂಗಾಜಲವೂ ಒಂದೇ ಎಂದು ತಿಳಿದಾಗ ನೀನು ಈಶ್ವರನನ್ನು ಪಡೆಯುವೆ' ಎಂಬ ಮಾತಿನ ಹಿನ್ನೆಲೆ ಇದು. ಎಲ್ಲೆಲ್ಲೂ ಬ್ರಹ್ಮವನ್ನು ಕಾಣುವ ಈ ಸಾಧುವಿಗೆ ಅದು ಕ್ಷಣಿಕ ಅನುಭವವಲ್ಲ; ಕೆಲವು ಹೊತ್ತು ಅಂಥ ಅವಸ್ಥೆಯಲ್ಲಿದ್ದು ಮರಳಿ ಸಾಮಾನ್ಯ ಅನುಭವಕ್ಕೆ ಮರಳುವ ಹಂತವೂ ಅವನದಲ್ಲ. ನಿರಂತರ ಸಾಕ್ಷಾತ್ಕಾರದ, ಬ್ರಹ್ಮಾನಂದದ ಅನುಭವದಲ್ಲಿ ಅವನು ಮುಳುಗೇಳುತ್ತಿರುತ್ತಾನೆ. ಅವಧೂತ ಗೀತೆ, ಅಷ್ಟಾವಕ್ರಗೀತೆ, ವಿವೇಕ ಚೂಡಾಮಣಿ ಮೊದಲಾದ ಕೃತಿಗಳಲ್ಲಿ ವರ್ಣಿಸಿರುವ ಬ್ರಹ್ಮಜ್ಞಾನಿಯ ಲಕ್ಷಣದೊಂದಿಗೆ ಈ

ಸಾಧುವಿನ ಅವಸ್ಥೆ ಹೊಂದಿಕೊಳ್ಳುತ್ತದೆ. ಗೀತೆಯಲ್ಲಿ ಜ್ಞಾನಿಯು ಸಮದರ್ಶಿಯಾಗಿರುತ್ತಾನೆ ಎನ್ನಲಾಗಿದೆ. (**'ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ । ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ'** – 'ವಿದ್ಯಾವಿನಯಗಳಿಂದ ಕೂಡಿದ ಬ್ರಾಹ್ಮಣ, ಗೋವು, ಆನೆ, ನಾಯಿ ಮತ್ತು ನಾಯಿಯ ಮಾಂಸವನ್ನು ತಿನ್ನುವವನು – ಇವರೆಲ್ಲರಲ್ಲೂ ಜ್ಞಾನಿಗಳು ಸಮದರ್ಶಿಗಳಾಗಿರುವರು.' *ಗೀತೆ, ೫.೧೮*) ಎಲ್ಲೆಲ್ಲೂ ಒಂದೇ ಸಮನಾಗಿ ಭಗವಂತನನ್ನು ಕಾಣುವುದು ಸಮದರ್ಶಿತ್ವ. ಇಲ್ಲಿ 'ಕಾಣುವುದು' ಎಂದರೆ ಅದು ಆದರ್ಶವೆಂದು ಭಾವಿಸುವುದಿಲ್ಲ; ಅದು ಯಥಾರ್ಥ ಅನುಭವ. ನಾವು ಈಗ ಜಗತ್ತನ್ನು ಹೇಗೆ ಪ್ರತ್ಯಕ್ಷ ಅನುಭವಿಸುವೆವೋ ಅಂಥ ಅನುಭವ. ಈ ಅನುಭವ ಮಾಡಿಕೊಂಡವನಿಗೆ ಪ್ರಪಂಚದ ಎಲ್ಲವೂ ಅಮುಖ್ಯವೆನಿಸುತ್ತದೆ; ಅವನು ಅದನ್ನು ಮೀರಿಹೋಗುತ್ತಾನೆ.

ಶ್ರೀರಾಮಕೃಷ್ಣರ ಅಧ್ಯಾತ್ಮಿಕ ಅವಸ್ಥೆ ಅತ್ಯುಚ್ಚ ಸ್ತರದಲ್ಲಿತ್ತು. ಆದ್ದರಿಂದಲೇ ಅವರು ಅಂಥ ಸಾಧುಗಳನ್ನು ಕಂಡ ಕೂಡಲೇ ಅವರ ಅವಸ್ಥೆಯನ್ನು ಗುರುತಿಸಬಲ್ಲವರಾಗಿದ್ದರು. ಸಾಮಾನ್ಯ ವ್ಯಕ್ತಿಗಳು ಅಂಥವರನ್ನು ಭಿಕ್ಷುಕರೆಂದೋ, ಹುಚ್ಚರೆಂದೋ ದೂರೀಕರಿಸುತ್ತಾರೆ. ಶ್ರೀರಾಮಕೃಷ್ಣರು ಆತನಲ್ಲಿ ಬ್ರಹ್ಮಜ್ಞಾನಿಯನ್ನು ಕಂಡರು. ಹೊರಗಿನಿಂದ ಯಾವುದೇ ಸ್ಫುರಣೆ ಬಂದರೂ ಶ್ರೀರಾಮಕೃಷ್ಣರ ಮನಸ್ಸು ಕೂಡಲೇ ಉನ್ನತ ಭಾವಕ್ಕೇರಿಬಿಡುತ್ತಿತ್ತು. ಭಗವಂತನ ಭಾವವನ್ನು ಅವರಲ್ಲಿ ಎಬ್ಬಿಸಲು ಯಾವುದೋ ಒಂದು ವಸ್ತು, ಒಂದು ಸಂಗತಿ, ಅಥವಾ ಭಗವಂತನ ಹೆಸರು ಸಾಕಾಗಿತ್ತು. ಸಹಜವಾಗಿಯೇ ಈ ಜ್ಞಾನೋನ್ಮತ್ತ ಸಾಧುವಿನ ದರ್ಶನ ಶ್ರೀರಾಮಕೃಷ್ಣರ ಮನಸ್ಸನ್ನು ಉನ್ನತ ಸ್ತರಕ್ಕೆ ಒಯ್ಯತೊಡಗಿತು. ಆದ್ದರಿಂದಲೇ ಅವರು, 'ನಾನೂ ಅವನಂತೆ ತಿರುಗಾಡಬೇಕಾದೀತೇನೋ' ಎಂದು ಭಯಗೊಂಡರು. ಅವನ ವಿಚಾರವಾಗಿ ತಿಳಿದುಕೊಳ್ಳಲು ಅವರು ಹೃದಯನನ್ನು ಆತನ ಬಳಿಗೆ ಕಳುಹಿಸಿದರು; ಪಾಪ, ಹೃದಯನಿಗೇನೋ ಅವನ ಉನ್ನತ ಅವಸ್ಥೆಯ ಪರಿಚಯವಾದರೂ, ಅವನಿಂದ ಒಂದು ಮಾತಿನ ಉಪದೇಶವಲ್ಲದೆ ಬೇರೇನೂ ದೊರೆಯುಲಿಲ್ಲ. ಆದರೆ ಸ್ವತಃ ತನ್ನ ಮಾವನೇ ಅವನಂತೆ ಪರಮಹಂಸಾವಸ್ಥೆಯಲ್ಲಿ ಈಜಾಡುತ್ತಿರುವ ಮಹಾತ್ಮನೆಂದೂ, ಬ್ರಹ್ಮಜ್ಞಾನವನ್ನೇ ನಿರಂತರ ಉಸಿರಾಡುತ್ತಿರುವ ಅವಧೂತನೆಂದೂ ಹೃದಯನಿಗೆ ಅರ್ಥವಾಗಲಿಲ್ಲವೆ?

ಜನಸಾಮಾನ್ಯರ ದೃಷ್ಟಿಯಿಂದ ಮರೆಯಾಗಿ, ತನ್ನ ವಿಚಿತ್ರ ವೇಷ, ನಡತೆಗಳಿಂದ ತನ್ನನ್ನು ತಾನು ಅವಿತಿಟ್ಟುಕೊಳ್ಳುವ ಸ್ವಭಾವ ಹಲವು ಮಂದಿ ಸಾಧುಗಳಲ್ಲಿದೆ. ಒಬ್ಬ ಆಧ್ಯಾತ್ಮಿಕ ಅನುಭವ ಹೊಂದಿದ್ದಾನೆ ಎಂಬ ಸುಳಿವು ಸಿಕ್ಕ ಕೂಡಲೇ ಜನ ಅವನನ್ನು ಮುತ್ತುತ್ತಾರೆ; ತೀರ ಅಜ್ಞಾನಿಯಿಂದ ಹಿಡಿದು ಅತ್ಯುತ್ತಮ ಸಾಧಕರವರೆಗೆ ವಿವಿಧ ಬಗೆಯ ಜನ ಅವನ ಸುತ್ತ ಸೇರುತ್ತಾರೆ. ಕುತೂಹಲಕ್ಕಾಗಿಯೋ, ಕುಚೋದ್ಯಕ್ಕಾಗಿಯೋ, ಅಥವಾ ಮಾರ್ಗದರ್ಶನಕ್ಕಾಗಿಯೋ ಅವರು ಸಾಧುವನ್ನು ಸಮೀಪಿಸುತ್ತಾರೆ. ಆದರೆ ಸಾಧುವಿಗೆ ಅದೊಂದೂ ಬೇಕಿಲ್ಲ; ಎಲ್ಲೆಲ್ಲೂ ಬ್ರಹ್ಮವನ್ನೇ ಅನುಭವಿಸುತ್ತಿರುವವನಿಗೆ ಪ್ರಪಂಚ ಇದ್ದರೇನು, ಹೋದರೇನು? ಅನೇಕ ಸಲ ಜನರ ಸಂಗ ಅವರಿಗೊಂದು ಪೀಡೆಯೆಂದೇ ಅನ್ನಿಸುವುದು; ಅದಕ್ಕಾಗಿ ಅವರು ತಮ್ಮ ನೈಜ ಸ್ವರೂಪವನ್ನು ಮರೆಮಾಚಿ ದೂರ ಇರುತ್ತಾರೆ. ಇಂಥ ಸಾಧುಗಳು ಹಲವೆಡೆ, ವಿವಿಧ ಕಾಲಘಟ್ಟದಲ್ಲಿ ಕಂಡುಬಂದಿರುವ ಬಗ್ಗೆ ಹಲವು ದಾಖಲೆಗಳಿವೆ. ಈಗಲೂ ಅಂಥವರು ಜನರ ಕಣ್ಣಿಗೆ ಮರೆಯಾಗಿ ಎಲ್ಲೋ ಇರಬಹುದೇನೋ!

'ಹೂ ಅರಳಿದಾಗ ದುಂಬಿಗಳು ತಾವೇತಾವಾಗಿ ಅದರತ್ತ ಬಂದು ಮುತ್ತತೊಡಗುತ್ತವೆ' ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ಆಧ್ಯಾತ್ಮಿಕ ಅನುಭವ ಪಡೆದವನು ಅರಳಿದ ಹೂವಿನಂತೆ. ಅವನಲ್ಲಿ ಬ್ರಹ್ಮಜ್ಞಾನವೆಂಬ ಮಕರಂದವಿದೆ; ಅದರ ಸುಗಂಧ ಎಲ್ಲೆಡೆ ಹರಡತೊಡಗುತ್ತದೆ. ಭಕ್ತರು ದುಂಬಿಗಳಂತೆ ತಾವಾಗಿಯೇ ಅಂಥವರ ಬಳಿಗೆ ಬರತೊಡಗುತ್ತಾರೆ. ಶ್ರೀರಾಮಕೃಷ್ಣರು ಇದಕ್ಕೆ ಅತ್ಯುತ್ತಮ ಉದಾಹರಣೆ. ಅವರ ಸಾಧನೆಯ ವರ್ಷಗಳಲ್ಲಿ ಅವರ ಬಳಿಗೆ ಬರುತ್ತಿದ್ದ ಭಕ್ತರ ಸಂಖ್ಯೆ ತೀರ ಕಡಿಮೆ; ಇಲ್ಲವೇ ಇಲ್ಲ ಎನ್ನಬಹುದು. ಅವರ ಸಾಧನೆಗಳೆಲ್ಲ ಮುಗಿದು, ಅವರ ವಿಷಯವಾಗಿ ಜನರ ನಡುವೆ ಸುದ್ದಿ ಹಬ್ಬತೊಡಗಿದಂತೆಲ್ಲ ಭಕ್ತರ ಸಂಖ್ಯೆ ಹೆಚ್ಚಿತು, ಜನ ಬರತೊಡಗಿದರು. ಇಲ್ಲಿ ಶ್ರೀರಾಮಕೃಷ್ಣರಿಗೂ ಜ್ಞಾನೋನ್ಮತ್ತ ಸಾಧುವಿಗೂ ಇದ್ದ ಒಂದು ಪ್ರಮುಖ ವ್ಯತ್ಯಾಸವನ್ನು ಗಮನಿಸಬೇಕು. ಜ್ಞಾನೋನ್ಮತ್ತ ಸಾಧು ಜನರ ಸಂಗವನ್ನು ತ್ಯಜಿಸಿದ್ದ; ಅವರ ಕಣ್ಣಿಗೆ ಮರೆಯಾಗಿ ಬಿಡುತ್ತಿದ್ದ. ಆದರೆ ಶ್ರೀರಾಮಕೃಷ್ಣರು ಭಕ್ತರ ಸಂಗವನ್ನು ಬಯಸಿದ್ದರು, ಅವರ ಆಗಮನಕ್ಕಾಗಿ ಹಾತೊರೆದು, 'ಎಲ್ಲಿ ನನ್ನ ಭಕ್ತರು?' ಎಂದು ಕಣ್ಣೀರು ಸುರಿಸುತ್ತಿದ್ದರು. ಸದಾ ಭಕ್ತರ ಸಂಗದಲ್ಲಿರುವ ಅವಸ್ಥೆ ತನಗಿರಲಿ ಎಂದೂ ಅವರು ಜಗನ್ಮಾತೆಯನ್ನು ಬೇಡುತ್ತಾರೆ. ಹೀಗೆ ಜ್ಞಾನೋನ್ಮತ್ತ ಸಾಧುವಿಗಿಂತ ಶ್ರೀರಾಮಕೃಷ್ಣರ ಭಾವ ಭಿನ್ನವಾಗಿತ್ತು; ಅದಕ್ಕೆ ನಾವು ಎರಡು ಕಾರಣಗಳನ್ನು ಕಂಡುಕೊಳ್ಳಬಹುದು:

**೧) ಜ್ಞಾನಿ ಹಾಗೂ ಭಕ್ತನ ಭಾವಗಳಲ್ಲಿನ ವ್ಯತ್ಯಾಸ:** ಶಾಸ್ತ್ರಗಳಲ್ಲಿ 'ಜಡವತ್, ಪಿಶಾಚವತ್, ಉನ್ಮತ್ತವತ್' ಎಂದು ವರ್ಣಿಸಿರುವ ಸಾಧುವಿನ ಲಕ್ಷಣಗಳೆಲ್ಲ ಜ್ಞಾನಿಯ, ಬ್ರಹ್ಮಜ್ಞಾನಿಯ ಒಂದು ಅವಸ್ಥೆಯಾಗಿದೆ. ಜ್ಞಾನಮಾರ್ಗಾವಲಂಬಿಯಾದ ಸಾಧುವಿನ ಗುರಿ ಬ್ರಹ್ಮಜ್ಞಾನ; ಅದನ್ನು ಹೊಂದಿದ ನಂತರ ಅವನು ಸಾಧಿಸಬೇಕಾದುದ್ದೇನೂ ಇಲ್ಲ. ಒಂದು ವೇಳೆ ಅವನು ದೇಹ, ಮನಸ್ಸು, ಅಂತಃಕರಣಗಳಿಂದ ಕೂಡಿದ ದೇಹವನ್ನು ಧರಿಸಿದ್ದರೆ, ಅದು ಲೋಕಕಲ್ಯಾಣಕ್ಕಾಗಿ ಮಾತ್ರ. ಅದೂ ಅವನ ಇಚ್ಛಾನುಸಾರ; ಅವನಿಗೆ ಇಚ್ಛೆಯಿಲ್ಲದಿದ್ದರೆ ತಾನು ಹೇಗೆ ಬೇಕೋ ಹಾಗೆ ಇರಬಹುದು. ಅಂಥವರು ಪ್ರಪಂಚದ ಬಗ್ಗೆ ಲೆಕ್ಕಿಸುವುದಿಲ್ಲ; ಜನರ ನಡುವೆ ಒಂದಾಗಬಯಸುವುದಿಲ್ಲ.

ಶ್ರೀರಾಮಕೃಷ್ಣರು ಜ್ಞಾನಿಯೂ ಹೌದು, ಭಕ್ತನೂ ಹೌದು. ಅವರು ಜ್ಞಾನಮಾರ್ಗದಲ್ಲಿ ಹೇಳಿರುವ ಅತ್ಯುನ್ನತ ಅನುಭವಗಳನ್ನೆಲ್ಲ

ಪಡೆದಿದ್ದರು; ಅದ್ವೈತಾನುಭವದಲ್ಲೇ ಹಲವು ಬಾರಿ ವಿಹರಿಸಿದ್ದರು. ಆದರೂ ಅವರದು ಸಹಜವಾಗಿ ಭಕ್ತನ ಭಾವ; ಭಕ್ತನಾಗಿ ಭಗವದಾನಂದವನ್ನು ನಿರಂತರ ಸವಿಯುವ ಬಯಕೆಯನ್ನು ಇಟ್ಟುಕೊಂಡಿದ್ದರು. ಭಕ್ತರ ಸಂಗದಲ್ಲಿರುತ್ತ, ಅವರೊಂದಿಗೆ ಭಗವಂತನನ್ನೇ ಕುರಿತು ಮಾತನಾಡುತ್ತ, ಆ ಮೂಲಕ ಅವರನ್ನು ಭಗವದಾನಂದವನ್ನು ಸವಿಯಲು ಪ್ರೇರೇಪಿಸುತ್ತ ಶ್ರೀರಾಮಕೃಷ್ಣರು ತಮ್ಮ ಜೀವಿತವನ್ನೆಲ್ಲ ಕಳೆದರು. ಭಕ್ತನಿಗೂ ಜ್ಞಾನಿಗೂ ಇರುವ ವ್ಯತ್ಯಾಸವಿದು: ಭಕ್ತ ಪ್ರಪಂಚದಿಂದ ವಿಮುಖನಾಗುವುದಿಲ್ಲ; ಪ್ರಪಂಚವನ್ನು ಕಡೆಗಣಿಸುವುದಿಲ್ಲ. ಪ್ರಪಂಚದಲ್ಲಿ ಎಲ್ಲೆಡೆ ಅವನು ಭಗವಂತನ್ನನೇ ಕಾಣುತ್ತಾನೆ, ಎಲ್ಲ ವ್ಯಕ್ತಿಗಳ ಹೃದಯದಲ್ಲಿ ಭಗವಂತನನ್ನೇ ಕಾಣುತ್ತಾನೆ. ಜ್ಞಾನೋನ್ಮತ್ತ ಸಾಧುವನ್ನು ಕಂಡಾಗ ಶ್ರೀರಾಮಕೃಷ್ಣರ ಆಂತರ್ಯದಲ್ಲಿ ಅವನ ಭಾವವೇ ದೀಪ್ತವಾಗಿದ್ದಿರಬಹುದು; ಆದರೆ ಶ್ರೀರಾಮಕೃಷ್ಣರದು ಆ ಬಗೆಯ ಭಾವವಲ್ಲವೆಂಬುದು ಸ್ಪಷ್ಟ. ಅವರು ಜನರಿಂದ ದೂರವಾಗಲಿಲ್ಲ; ತಾನು ಇರುವಲ್ಲೇ ಇದ್ದು, ಜನರ ನಡುವೆಯೇ ಬ್ರಹ್ಮಾನಂದವನ್ನು ಅನುಭವಿಸುತ್ತಿದ್ದರು. ಶ್ರೀರಾಮಕೃಷ್ಣರು ಹೇಳುತ್ತಿದ್ದ ಕಥೆಯೊಂದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

''ಒಂದು ಬಹಳ ಎತ್ತರವಾದ ಗೋಡೆಯಿಂದಾಚೆ ವಿಶಾಲವಾದ ಮೈದಾನ. ನಾಲ್ಕು ಮಂದಿ ಸ್ನೇಹಿತರು ಆ ಗೋಡೆಯಿಂದಾಚೆ ಏನಿದೆ ಎಂಬುದನ್ನು ಪತ್ತೆಮಾಡಲು ಸನ್ನದ್ಧರಾದರು. ಅವರಲ್ಲಿ ಮೂರು ಜನರೂ ಒಬ್ಬೊಬ್ಬರಾಗಿ ಗೋಡೆ ಹತ್ತಿ, ಮೈದಾನವನ್ನು ನೋಡಿದ ನಂತರ ''ಆಹ! ಆಹ!'' ಅಂತ ಹೇಳಿ, ನಕ್ಕು ಆ ಕಡೆಗೆ ಧುಮುಕಿಬಿಟ್ಟರು. ಅವರು ಮೂವರೂ ಆ ಮೈದಾನದ ಯಾವ ಸುದ್ದಿ ಸಮಾಚಾರವನ್ನೂ ತಿಳಿಸಲೇ ಇಲ್ಲ. ಕೇವಲ ನಾಲ್ಕನೆಯವನು ಮಾತ್ರ ಹಿಂದಿರುಗಿ ಇಳಿದು ಬಂದು, ಜನರಿಗೆ ಸುದ್ದಿಸಮಾಚಾರವನ್ನು ಕೊಟ್ಟ. ಕೆಲವರು ಬ್ರಹ್ಮಜ್ಞಾನ ದೊರೆತ ನಂತರವೂ ಶರೀರ ಉಳಿಸಿಕೊಂಡಿರುತ್ತಾರಲ್ಲ, ಲೋಕಶಿಕ್ಷಣಕ್ಕಾಗಿ, ಅವರು ದೇವರ ಹಾಗೆ. ಅವತಾರಾದಿ ಪುರುಷರು ಈ ಗುಂಪಿಗೆ ಸೇರಿದವರು.'' *(ಶ್ರೀರಾಮಕೃಷ್ಣ ವಚನವೇದ ಭಾಗ ೧, ಪು. ೩೫೭)*

**೨. ಅವತಾರಪುರುಷರ ಸಮಗ್ರದೃಷ್ಟಿ** : ಜೀವಿಗಳಿಗೆ ಭಗವಂತನನ್ನು ಪಡೆಯುವ ಮಾರ್ಗವನ್ನು ತೋರಿಸಿಕೊಡಲು ಜಗತ್ತಿನಲ್ಲಿ ಮಾನವದೇಹ ಧರಿಸಿ ಬಂದ ಅವತಾರಪುರುಷರು ತಮ್ಮ ಅಪಾರ ಕರುಣೆಯಿಂದ ಜಗತ್ತಿನಲ್ಲಿ ಜೀವಿಸುತ್ತಾರೆ; ಜಗತ್ತಿನಿಂದ ಅವರಿಗೆ ಏನೂ ಆಗಬೇಕಾಗಿಲ್ಲದಿದ್ದರೂ, ಅವರು ಜಗತ್ತಿಗೆ ಬೆಳಕು ತೋರುವುದು ಅನುಕಂಪದಿಂದ ಮಾತ್ರ. ಈ ವಿಶೇಷತೆಯನ್ನು ನಾವು ಶ್ರೀರಾಮಕೃಷ್ಣರಲ್ಲಿ ಕಾಣುತ್ತೇವೆ.

ಸಾಮಾನ್ಯಜೀವಿಯ, ಸಾಧಕನ, ಭಕ್ತನ ದೃಷ್ಟಿಯಿಂದ ಶ್ರೀರಾಮಕೃಷ್ಣರ ಈ ಭಾವ ಅತ್ಯಂತ ಶ್ರೇಷ್ಠವಾದುದು. ಆದರೂ ಶ್ರೀರಾಮಕೃಷ್ಣರು 'ಜ್ಞಾನೋನ್ಮತ್ತಸಾಧು'ವಿನ ಅವಸ್ಥೆಯನ್ನು 'ಅತ್ಯುಚ್ಚ ಅವಸ್ಥೆ' ಎಂದು ಕರೆದರು. ಬ್ರಹ್ಮಜ್ಞಾನದಲ್ಲಿ ಎಲ್ಲವೂ ಒಂದಾಗುವುದು; ಅಲ್ಲಿ ಪ್ರಪಂಚವೂ ಭಗವನ್ಮಯವಾಗುವುದು. ಪ್ರಪಂಚದಲ್ಲಿ ಸಾಧು ಹೇಗಿದ್ದರೂ ಒಂದೆ; ವ್ಯತ್ಯಾಸವಿಲ್ಲ. ಈ ಬಗೆಯ ಸಾಧುಗಳು ದಕ್ಷಿಣೇಶ್ವರಕ್ಕೆ ಆಗಾಗ ಬರುತ್ತಿದ್ದರು. ಶ್ರೀರಾಮಕೃಷ್ಣರತ್ತ ಅವರು ತೀವ್ರವಾಗಿ ಆಕರ್ಷಿತರಾಗುತ್ತಿದ್ದರು. ಅವರೊಂದಿಗೆ ಶ್ರೀರಾಮಕೃಷ್ಣರು ಆತ್ಮೀಯವಾಗಿ ಒಡನಾಡಿ, ಅವರ ಆಧ್ಯಾತ್ಮಿಕ ಅಗತ್ಯಗಳನ್ನು ಪೂರೈಸುತ್ತಿದ್ದರು. ಹಲವು ಮಂದಿ ಸಾಧಕರು ಶ್ರೀರಾಮಕೃಷ್ಣರಲ್ಲೇ ತಮ್ಮ ಆದರ್ಶವನ್ನು, ತಮ್ಮ ಇಷ್ಟದೈವವನ್ನು ಕಂಡು ಕೃತಾರ್ಥರಾದರು.

ಶ್ರೀರಾಮಕೃಷ್ಣರು ಹೇಳಿದ 'ಜ್ಞಾನೋನ್ಮತ್ತ ಸಾಧು'ವಿನ ಕತೆ ನಮ್ಮಲ್ಲೂ ತೀವ್ರ ತ್ಯಾಗ, ವೈರಾಗ್ಯಗಳ ಭಾವವನ್ನು ಉಕ್ಕಿಸುತ್ತದೆ. ಅಂಥ ಸದಾನಂದಮಯ ಭಾವವನ್ನು ಹೊಂದಲು ಹೃದಯ ಹಾತೊರೆಯುತ್ತದೆ. ಎಲ್ಲಿ ಸಾವುನೋವುಗಳಿಲ್ಲವೋ, ದುಃಖ-ದುರಂತಗಳಿಲ್ಲವೋ, ಪ್ರಾಪಂಚಿಕ ಏರುಪೇರುಗಳಾಗಲೀ, ಸಾಂಸಾರಿಕ ಬಂಧನಗಳಾಗಲೀ ಇಲ್ಲವೋ; ಅದಕ್ಕೆ ಬದಲಾಗಿ ಎಲ್ಲಿ ನಿರಂತರ ಬ್ರಹ್ಮಾನಂದದ ಅವರ್ಣನೀಯ ಸುಖ ಹರಿದಾಡುತ್ತದೋ, ಎಲ್ಲಿ ಎಲ್ಲವನ್ನೂ ಮೀರಿದ ಏಕತೆ, ಸ್ವಾತಂತ್ರ್ಯ, ಪಾವಿತ್ರ್ಯಗಳು ತುಂಬಿ ತುಳುಕಾಡುವವೋ - ಇಂಥ ಅದ್ಭುತ ಅವಸ್ಥೆಗಿಂತ ಮಿಗಿಲಾದ ಅನುಭವ ಬೇರೇನಿದೆ? ಇಂಥ ಸತ್ಯಸಾಕ್ಷಾತ್ಕಾರದ ನೆಲೆಯನ್ನು ಹೊಂದಲು ಅಗತ್ಯವಾದ ಪ್ರೇರಣೆ ಇಂಥ ಸಾಧುವಿನ ಜೀವನದಿಂದ ಲಭಿಸುತ್ತದೆ. ಆದರೆ ಶ್ರೀರಾಮಕೃಷ್ಣರು ಹೇಳಿದಂತೆ, 'ನಾವೂ ಅವನಂತೆ ತಿರುಗಾಡಬೇಕೇ, ಅವನಂತೆ ಎಂಜಲನ್ನ ತಿನ್ನಬೇಕೆ?' ಎಂಬ ಪ್ರಶ್ನೆ ನಮ್ಮಲ್ಲೂ ಮೂಡಿದರೆ, ಅಂಥ ಅವಸ್ಥೆಯನ್ನು ತಲುಪಿದ ಎಲ್ಲರೂ ಹಾಗಿರಬೇಕಿಲ್ಲ ಎಂಬುದೇ ಉತ್ತರ. ನಮಗೆ ತಿಳಿದಂತೆ, ಸಾಧುಗಳು ಬ್ರಹ್ಮಜ್ಞಾನ ಪಡೆದ ನಂತರ ಹೇಗೆ ಬೇಕಾದರೂ ಇರಬಹುದು; ಅದು ಅವರ ಇಚ್ಛೆಗನುಗುಣವಾಗಿ. ತ್ರೈಲಂಗಸ್ವಾಮಿಗಳಂತೆ ನಗ್ನರಾಗಿರಬಹುದು; ಜನಕನಂತೆ ರಾಜನಾಗಿರಬಹುದು; ಅಥವಾ ರಮಣಮಹರ್ಷಿಗಳಂತೆ ಆಶ್ರಮವಾಸಿಗಳಾಗಿರಬಹುದು. ಅವರ ಪಾಲಿಗೆ ಎಲ್ಲವೂ ಒಂದೆ. ವ್ಯತ್ಯಾಸವಿರುವುದು ನಮ್ಮ ಕಣ್ಣಿನಲ್ಲಿ ಮಾತ್ರ.

ಅಂಥ ಅವಸ್ಥೆಯನ್ನು ತಲುಪುವುದು ಎಷ್ಟು ದೂರ? ಹಲವು ವರ್ಷಗಳೋ, ಹಲವು ಜನ್ಮಗಳೋ! ಬ್ರಹ್ಮಜ್ಞಾನ ಪಡೆಯುವವರ ಸಂಖ್ಯೆ ಲಕ್ಷ, ಕೋಟಿಗೆ ಒಬ್ಬರು ಮಾತ್ರ; ಉಳಿದವರ ಗತಿ? - ಸಾಮಾನ್ಯ ಬದುಕನ್ನು ಹೊಂದಿರುವ, ಎಲ್ಲರಂತೆ ಸುಖ-ದುಃಖ, ರಾಗ-ದ್ವೇಷ, ನೋವು-ನಲಿವುಗಳನ್ನು ಹೊಂದಿರುವ ನಾವೆಲ್ಲ ಇಂಥ 'ಜ್ಞಾನೋನ್ಮತ್ತ ಸಾಧು'ವಿನಂತೆ ಇದ್ದಕ್ಕಿದ್ದಂತೆ ಆಗಲಾರೆವು. ಆದರೆ ಅದು ಆದರ್ಶ; ಅತ್ಯುಚ್ಚ ಅವಸ್ಥೆ. ಅದರ ಹಿಂದಿರುವ ತ್ಯಾಗ, ವೈರಾಗ್ಯ, ವಿವೇಕ, ಸಮದರ್ಶಿತ್ವ, ಪ್ರಪಂಚದಲ್ಲಿ ಅನಾಸಕ್ತಿ - ಈ ಭಾವಗಳನ್ನು ನಮ್ಮ ಆಂತರ್ಯದಲ್ಲಿ ಧರಿಸಿಕೊಳ್ಳಬಹುದು. ನಮ್ಮಿಂದ ಸಾಧ್ಯವಾದಷ್ಟು ಈ ಗುಣಗಳನ್ನು ದೈನಂದಿನ ಜೀವನದಲ್ಲಿ ಪಾಲಿಸಲು ಯತ್ನಿಸಬಹುದು. ✷



# ಅಹಂಕಾರ

ಅಭಿಮಾನ ತ್ಯಜಿಸುವುದೆಂದರೆ ಬಹಳ ಕಷ್ಟ. ವಿಚಾರ ಮಾಡಬಹುದು, ಅಹಂಕಾರವೆಂಬುದು ಏನೂ ಇಲ್ಲ ಎಂಬುದಾಗಿ. ಆದರೂ ಎಲ್ಲಿಂದಲೋ ಅದು ಬಂದುಬಿಡುತ್ತದೆ. ಆಡಿನ ತಲೆಯನ್ನು ಕತ್ತರಿಸಿದ ನಂತರವೂ ಅದರ ಅಂಗ ಪ್ರತ್ಯಂಗ ಸ್ವಲ್ಪ ಹೊತ್ತು ಅಲುಗಾಡುತ್ತಿರುತ್ತದೆ. ಸ್ವಪ್ನದಲ್ಲಿ ಏನೋ ಒಂದು ಭಯಂಕರ ಅನುಭವವಾಯಿತು ಎಂದಿಟ್ಟುಕೊಳ್ಳಿ. ನಿದ್ದೆಯಿಂದ ಏಳುತ್ತೇವೆ, ಚೆನ್ನಾಗಿ ಎಚ್ಚರಗೊಂಡಿರುತ್ತೇವೆ. ಆದರೂ ಎದೆ ಮಾತ್ರ 'ಡಬ ಡಬ' ಅಂತ ಇನ್ನೂ ಹೊಡೆದು ಕೊಳ್ಳುತ್ತಿರುತ್ತದೆ. ಅಹಂಕಾರವೂ ಹಾಗೆ. ಹೊಡೆದೋಡಿಸಿದರೂ ಎಲ್ಲಿಂದಲೋ ಬಂದುಬಿಡುತ್ತದೆ. ಆಗ ಮನುಷ್ಯ ಹುಬ್ಬು ಗಂಟುಹಾಕಿಕೊಂಡವನಾಗಿ ಹೇಳುತ್ತಾನೆ: ''ಏನಿದು! ನನಗೆ ಗೌರವ ತೋರಿಸದೆ ಹೋದರಲ್ಲ! ''

❋ ಅಹಂಕಾರವಿರುವವರೆಗೆ ಅಜ್ಞಾನ ಇದ್ದೇ ಇರುತ್ತದೆ. ಅಹಂಕಾರ ಇತ್ತು ಎಂದರೆ ಮುಕ್ತಿ ದೊರೆಯುವ ಹಾಗಿಲ್ಲ. 'ಹೇ ಭಗವಂತ, ನೀನೇ ಕರ್ತೃ, ನಾನು ಅಕರ್ತ' ಎಂಬುದೇ ಜ್ಞಾನ.

❋ ಕೈಯಲ್ಲಿ ಹಣವಿದ್ದ ಮಾತ್ರಕ್ಕೇ ಜನ ದೊಡ್ಡವರಾಗುವುದಿಲ್ಲ. ದೊಡ್ಡ ಮನುಷ್ಯನ ಮನೆ ಇದು ಎಂದು ಹೇಳುವುದಕ್ಕೆ ಒಂದು ಕುರುಹು, ಆತನ ಮನೆಯ ಎಲ್ಲಾ ಕೊಠಡಿಗಳಲ್ಲೂ ದೀಪ ಉರಿಯುತ್ತಿರುತ್ತದೆ. ಬಡವರು ಅಷ್ಟೊಂದು ಎಣ್ಣೆ ಖರ್ಚು ಮಾಡಲಾರರು. ಆದ್ದರಿಂದ ಅವರು ಅನೇಕ ದೀಪಗಳನ್ನು ಉರಿಸಲಾರರು. ಈ ದೇಹಮಂದಿರವನ್ನು ಅಂಧಕಾರದಲ್ಲಿ ಇರಿಸಕೂಡದು; ಅದನ್ನು ಜ್ಞಾನದೀಪದಿಂದ ಬೆಳಗಿಸಬೇಕು.

❋ 'ನಾನು', 'ನನ್ನದು' ಎಂಬುದೇ ಅಜ್ಞಾನ. ವಿಚಾರ ಮಾಡುತ್ತಾ ಹೋದರೆ ಈ 'ನಾನು' ಎಂಬುದು ಆತ್ಮವಲ್ಲದೆ ಬೇರೇನೂ ಅಲ್ಲ ಎಂಬ ಅರಿವು ಉಂಟಾಗುತ್ತದೆ. ವಿಚಾರ ಮಾಡಿ ನೋಡು – ನೀನು ಶರೀರವೆ, ಮೂಳೆಯೆ, ಮಾಂಸವೆ ಅಥವಾ ಬೇರೇನಾದರೂ ಆಗಿದ್ದೀಯಾ ಎಂಬುದನ್ನು. ಕೊನೆಗೆ ನಿನಗೆ ಅರ್ಥವಾಗುತ್ತದೆ, ಅವೊಂದೂ ನೀನಲ್ಲ, ನಿನಗೆ ಯಾವ ಉಪಾಧಿಯೂ ಇಲ್ಲ ಎಂಬುದಾಗಿ.

❋ ಅಜ್ಞಾನವಶದಿಂದ ಮನುಷ್ಯ ಹೇಳುತ್ತಾನೆ, 'ಇದು ಚಿನ್ನ, ಅದು ಹಿತ್ತಾಳೆ' ಎಂದು. ಆದರೆ ಜ್ಞಾನಿ, 'ಎಲ್ಲವೂ ಚಿನ್ನ' ಎನ್ನುತ್ತಾನೆ.

❋ ಅರಿಷಡ್ವರ್ಗಗಳನ್ನು ಭಗವಂತನ ಕಡೆಗೆ ತಿರುಗಿಸಿಬಿಡು. ಆತ್ಮನೊಡನೆ ವಿಲಾಸಿಸಬೇಕು ಎಂದು ಕಾಮನೆ ಮಾಡಬೇಕು. ಯಾರು ಭಗವಂತನ ಮಾರ್ಗಕ್ಕೆ ತಡೆ ಒಡ್ಡುತ್ತಾರೋ ಅವರ ಮೇಲೆ ಕೋಪಿಸಿಕೊಳ್ಳಬೇಕು. ಆತನ ಸಾಕ್ಷಾತ್ಕಾರಕ್ಕಾಗಿ ಲೋಭ ಪಡಬೇಕು. 'ನಾನು, ನನ್ನದು' ಎಂಬುದನ್ನು ಬಿಡಲಾಗದಿದ್ದರೆ ಭಗವಂತನ ಸಂಬಂಧವಾಗಿ ಮಾತ್ರ ಹಾಗೆ ಮಾಡಬೇಕು. ಅಹಂಕಾರ ಪಡಬೇಕಾಗಿದ್ದರೆ ವಿಭೀಷಣನ ಹಾಗೆ ವರ್ತಿಸಬೇಕು. ಆತ ಹೇಳಿದ, 'ನಾನು ಶ್ರೀರಾಮನಿಗೆ ಸಾಷ್ಟಾಂಗ ಪ್ರಣಾಮ ಮಾಡಿದ್ದೇನೆ. ಈ ತಲೆಯಿಂದ ನಾನು ಬೇರೆ ಯಾರ ಪಾದವನ್ನೂ ಸ್ಪರ್ಶ ಮಾಡುವುದಿಲ್ಲ.'

❋ ಎಲ್ಲಿಯವರೆಗೆ ಭಗವಂತ ನಮ್ಮಲ್ಲಿ 'ಅಹಂ' ಎಂಬುದನ್ನು ಇಟ್ಟಿರುತ್ತಾನೋ ಅಲ್ಲಿಯವರೆಗೆ ಎಲ್ಲವೂ ಇವೆ. ಈ ಜಗತ್ತನ್ನು ಸ್ವಪ್ನವತ್ ಅಂತ ಹೇಳುವ ಹಾಗಿಲ್ಲ. ಒಲೆಯಲ್ಲಿ ಬೆಂಕಿ ಉರಿಯುತ್ತಿದೆ; ಅದಕ್ಕಾಗಿ ತಪ್ಪಲೆಯಲ್ಲಿ ಅಕ್ಕಿ, ಆಲೂಗಡ್ಡೆ, ಬದನೆಕಾಯಿ ಎಲ್ಲಾ ನೆಗೆದಾಡುತ್ತಿರುತ್ತವೆ, 'ನಾವು ಇಲ್ಲಿದ್ದೇವೆ! ನಾವು ನೆಗೆದಾಡುತ್ತಿರುತ್ತೇವೆ!' ಎಂದು ಹೇಳುತ್ತಿರುವುವೋ ಎಂಬಂತೆ. ಈ ಶರೀರವೇ ತಪ್ಪಲೆ, ಮನಸ್ಸು ಬುದ್ಧಿಗಳೇ ನೀರು, ಇಂದ್ರಿಯ; ವಿಷಯವಸ್ತುಗಳೇ ಅಕ್ಕಿ, ಬೇಳೆ, ಆಲೂಗಡ್ಡೆ, ಬದನೆಕಾಯಿ. 'ಅಹಂ' ಎಂಬುದೇ 'ನಾವು ನೆಗೆದಾಡುತ್ತಿದ್ದೇವೆ' ಎಂಬ ಅಭಿಮಾನ. ಸಚ್ಚಿದಾನಂದನೇ ಬೆಂಕಿ.

❋ ಮನುಷ್ಯ ಭಗವಂತನಲ್ಲಿ ಲೀನನಾಗಿಬಿಟ್ಟನೆಂದರೆ, ಆತನಲ್ಲಿ ದುರ್ಬುದ್ಧಿಯೇ ಆಗಲಿ, ಪಾಪಬುದ್ಧಿಯೇ ಆಗಲಿ ಉಳಿದುಕೊಂಡಿರದು. 'ವಿದ್ಯಾ ಅಹಂ', 'ಭಕ್ತ ಅಹಂ', 'ದಾಸ ಅಹಂ', 'ಒಳ್ಳೆ ಅಹಂ' ಇವು ಉಳಿದುಕೊಂಡಿರುತ್ತವೆ. 'ನೀಚ ಅಹಂ' ಹೊರಟು ಹೋಗುತ್ತದೆ.

❋ ಒಬ್ಬ ಪಂಡಿತನಿಗೆ ಅಹಂಕಾರ ಬಹಳ ಜಾಸ್ತಿ. ಭಗವಂತನಿಗೆ ರೂಪವಿದೆಯೆಂಬುದನ್ನು ಆತ ಒಪ್ಪುತ್ತಿರಲಿಲ್ಲ. ಆದರೆ ಭಗವಂತನ ಕಾರ್ಯವನ್ನು ಯಾರು ತಾನೆ ಅರಿಯಬಲ್ಲರು? ಭಗವಂತ ಆದ್ಯಾಶಕ್ತಿ ರೂಪದಲ್ಲಿ ಆತನಿಗೆ ಕಾಣಿಸಿಕೊಂಡ. ಪಂಡಿತ ಬಹಳ ಹೊತ್ತಿನವರೆಗೆ ಬಾಹ್ಯಪ್ರಜ್ಞೆ ಇಲ್ಲದವನಾಗಿ ಬಿದ್ದಿರಬೇಕಾಯಿತು. ಕಿಂಚಿತ್ ಪ್ರಜ್ಞೆ ಬಂದ ಮೇಲೆ ಕೇವಲ 'ಕಾ! ಕಾ! ಕಾ!' ಅಂತ ಹೇಳಲಾರಂಭಿಸಿದ. ಆತನ ಕೈಯಲ್ಲಿ 'ಕಾಳಿ!' ಎಂಬ ಪದವನ್ನು ಪೂರ್ಣವಾಗಿ ಉಚ್ಚರಿಸಲೂ ಸಾಧ್ಯವಾಗಲಿಲ್ಲ.

❋ ಮನಸ್ಸು ಜ್ಞಾನದಲ್ಲಿ ಲಯವಾಗಿ ಹೋಗಬೇಕು. ಆದರೆ ಅದು ಸಾಕಾಗದು. 'ರಾಮ ಪ್ರಸಾದನ ಲಯ' ಎಂದರೆ 'ಅಹಂ ತತ್ತ್ವದ ಲಯ' ಆಗಬೇಕು. ಆಗ ಮಾತ್ರವೇ ಬ್ರಹ್ಮಜ್ಞಾನ ದೊರೆಯುತ್ತದೆ.

❋ ಕೆಲವು ವೇಳೆ ನಾನು ಹೇಳುವುದುಂಟು, 'ನಾನೇ ನೀನು, ನೀನೇ ನಾನು' ಎಂಬುದಾಗಿ. ಮತ್ತೆ ಕೆಲವು ವೇಳೆ ಅದು, 'ನೀನೇ, ನೀನು' ಎಂಬುದಾಗಿ ಆಗಿಹೋಗುತ್ತದೆ. ಆಗ 'ಅಹಂ' ಎಂಬುದಕ್ಕಾಗಿ ಎಷ್ಟು ಹುಡುಕಿದರೂ ಸಿಕ್ಕದು. ಅವತಾರ ಶಕ್ತಿಯದೇ. ಕೆಲವರ ದೃಷ್ಟಿಯಿಂದ, ರಾಮ-ಕೃಷ್ಣ ಎಂಬುವರು ಚಿದಾನಂದ ಸಾಗರದ ಎರಡು ಅಲೆ ಮಾತ್ರ.

ಶ್ರೀರಾಮಕೃಷ್ಣ ವಚನವೇದ ದಿಂದ

# ಶ್ರೀ ರಾಮಕೃಷ್ಣರ ಬೋಧನೆಯ ಬೆಳಕಿನಲ್ಲಿ ಅಷ್ಟಾವಕ್ರ ಸಂಹಿತೆ

**ಸ್ವಾಮಿ ಪರಹಿತಾನಂದ**



'ಅಷ್ಟಾವಕ್ರ ಸಂಹಿತೆ'ಯು ಸರಳ ಶೈಲಿಯಲ್ಲಿ ಗಹನ ತತ್ತ್ವಗಳನ್ನು ವಿವರಿಸುವ ಅದ್ವೈತಪರ ಕೃತಿಯಾಗಿದೆ. ಶ್ರೀರಾಮಕೃಷ್ಣರು ಅದನ್ನು ವಿಶೇಷವಾಗಿ ಉದಾಹರಿಸುತ್ತಿದ್ದರು. ಶ್ರೀರಾಮಕೃಷ್ಣರ ಉಪದೇಶಗಳ ಹಿನ್ನೆಲೆಯಲ್ಲಿ ಈ ಕೃತಿಯ ತತ್ತ್ವಗಳನ್ನು ವಿವರಿಸಿರುವ ಲೇಖಕರು ಪೊನ್ನಂಪೇಟೆ ಶ್ರೀರಾಮಕೃಷ್ಣ ಶಾರದಾಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದು, ವ್ಯಕ್ತಿತ್ವ ವಿಕಸನ ಹಾಗೂ ಶೈಕ್ಷಣಿಕ ತರಬೇತಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

**ಗು**ರು-ಶಿಷ್ಯ ಪರಂಪರೆ ನಮ್ಮ ಸನಾತನ ಸಂಸ್ಕೃತಿಯ ಅವಿಭಾಜ್ಯ ಅಂಗ. ವೈದಿಕ ಕಾಲದಿಂದಲೂ ನಾವು ಈ ಪರಂಪರೆಯ ವಿಶಿಷ್ಟತೆಯನ್ನು ಕಾಣುತ್ತಿದ್ದೇವೆ. ಅನುಭವದಿಂದ ಕೂಡಿದ ಗುರುವಿನ ಬೋಧನೆಗಳು ಶಿಷ್ಯನ ಅಜ್ಞಾನದ ಅಂಧಕಾರವನ್ನು ನೀಗಿ, ಬೆಳಕನ್ನಿತ್ತು ಪರಿಪೂರ್ಣತೆಯೆಡೆಗೆ ನಡೆಸುತ್ತವೆ. ಕಾಲಾಂತರದಲ್ಲಿ ಆ ಶಿಷ್ಯನೇ ಗುರುವಾಗಿ, ಪುನಃ ಅನೇಕ ಶಿಷ್ಯರ ಮನದ ತಮವನ್ನು ಕಳೆಯುತ್ತಾನೆ. ಅನಾದಿಕಾಲದಿಂದಲೂ ಹೀಗೆ ಸಾಗುತ್ತಿದೆ ನಮ್ಮ ಗುರು-ಶಿಷ್ಯ ಪರಂಪರೆ.

ಶ್ರೀರಾಮಕೃಷ್ಣರ ಮೆಚ್ಚಿನ ಶಿಷ್ಯ ನರೇಂದ್ರನಾಥ. ಅವರನ್ನು ಸಂಧಿಸುವುದಕ್ಕೆ ಮುಂಚೆ ನರೇಂದ್ರನಾಥನು ಬ್ರಾಹ್ಮ-ಸಮಾಜಕ್ಕೆ ಸೇರಿದ್ದರಿಂದ ಅವನು ಸಾಕಾರೋಪಾಸನೆಯನ್ನಾಗಲಿ ಅಥವಾ ಅದ್ವೈತ ತತ್ತ್ವವನ್ನಾಗಲಿ ಒಪ್ಪುತ್ತಿರಲಿಲ್ಲ. ಆದರೆ, ಶ್ರೀರಾಮಕೃಷ್ಣರು ತಮ್ಮ ಶಿಷ್ಯನ ಅಂತರಾಳ, ಭೂತ-ಭವಿಷ್ಯತ್‌ಗಳೆಲ್ಲವನ್ನೂ ಅರಿತಿದ್ದು, ಅವನು ಅದ್ವೈತ ತತ್ತ್ವಕ್ಕೆ ಉತ್ತಮ ಅಧಿಕಾರಿಯಾದ್ದರಿಂದ ಅವನಿಗೆ ಈ ತತ್ತ್ವದಲ್ಲಿ ನಂಬಿಕೆ ಮೂಡುವಂತೆ ಮಾಡಲು ಅನೇಕ ಬಗೆಯಲ್ಲಿ ಪ್ರಯತ್ನಿಸುತ್ತಿದ್ದರು. ಅವರು ಅದಕ್ಕಾಗಿಯೇ ಅವನು ದಕ್ಷಿಣೇಶ್ವರಕ್ಕೆ ಬಂದ ಕೂಡಲೇ **'ಅಷ್ಟಾವಕ್ರ ಸಂಹಿತೆ'** (ಅಥವಾ ಅಷ್ಟಾವಕ್ರ ಗೀತೆ') ಮುಂತಾದ ಅದ್ವೈತ ಗ್ರಂಥಗಳನ್ನು ಓದಲು ನೀಡುತ್ತಿದ್ದರು. ಆದರೆ, ನರೇಂದ್ರನಿಗೆ ಈ ಪುಸ್ತಕಗಳು ನಾಸ್ತಿಕ ಗ್ರಂಥಗಳೆಂದು ಅನ್ನಿಸುತ್ತಿದ್ದುದರಿಂದ ಅವನ್ನು ಓದಲು ನಿರಾಕರಿಸುತ್ತಿದ್ದ. ಆದರೆ, ಶಿಷ್ಯರ ಶಿಲ್ಪಿ ಶ್ರೀರಾಮಕೃಷ್ಣರ ಒತ್ತಾಯದಿಂದ ಸ್ವಲ್ಪ ಓದಿದ ಮೇಲೆ, 'ಇದಕ್ಕೂ ನಾಸ್ತಿಕತೆಗೂ ಏನು ವ್ಯತ್ಯಾಸ? ಸೃಷ್ಟ ಜೀವಿಯು ತನ್ನನ್ನು ಸ್ರಷ್ಟಾ ಎಂದು ಭಾವಿಸಲು ಸಾಧ್ಯವೆ? ಇದಕ್ಕಿಂತ ದೊಡ್ಡ ಪಾಪ ಇನ್ನೇನಿದೆ? ನಾನೂ ಈಶ್ವರ, ನೀನೂ ಈಶ್ವರ, ಜನನ ಮರಣಗಳಿಂದ ಕೂಡಿದ ಎಲ್ಲಾ ಪದಾರ್ಥಗಳೂ ಈಶ್ವರ – ಇದಕ್ಕಿಂತ ಹೆಚ್ಚಿನ ಅವಿವೇಕದ ಮಾತು ಬೇರೆ ಇರಲು ಸಾಧ್ಯವೆ? ಗ್ರಂಥಕರ್ತರಾದ ಋಷಿಮುನಿಗಳ ತಲೆ ಖಂಡಿತ ಕೆಟ್ಟಿದ್ದಿರಬೇಕು. ಇಲ್ಲದಿದ್ದರೆ ಇಂಥ ಮಾತುಗಳನ್ನು ಎಂದಾದರೂ ಬರೆಯುವುದುಂಟೆ?' ಎನ್ನುತ್ತಿದ್ದ.

ಈ ಮಾತುಗಳನ್ನು ಕೇಳಿ ಶ್ರೀರಾಮಕೃಷ್ಣರು ನಸುನಕ್ಕು, ಅವನ ಅಭಿಪ್ರಾಯಕ್ಕೆ ಧಕ್ಕೆ ತರದಂತೆ 'ನೀನು ಈಗ ಈ ಮಾತನ್ನು ಒಪ್ಪಿಕೊಳ್ಳದೆ ಇರಬಹುದು. ಆದರೆ, ಋಷಿಮುನಿಗಳನ್ನು ಏಕೆ ನಿಂದಿಸುತ್ತೀಯೆ? ಭಗವಂತನ ಸ್ವರೂಪಕ್ಕೆ ಮಿತಿಯನ್ನು ಕಲ್ಪಿಸುವುದಾದರೂ ಏಕೆ? ನೀನು ಸತ್ಯಸ್ವರೂಪನಾದ ಭಗವಂತನನ್ನು ಕರೆಯುತ್ತಾ ಹೋಗು, ಅನಂತರ ಅವನು ನಿನಗೆ ಯಾವ ರೀತಿ ಕಾಣಿಸಿಕೊಳ್ಳುವನೋ ಅದರಲ್ಲಿ ವಿಶ್ವಾಸವಿಡು' ಎನ್ನುತ್ತಿದ್ದರು. ಆದರೆ ನರೇಂದ್ರನು ಶ್ರೀರಾಮಕೃಷ್ಣರ ಮಾತಿಗೆ ಕಿವಿಗೊಡದೆ ತನ್ನ ಯುಕ್ತಿಯ ಮೂಲಕ ಅದ್ವೈತ ತತ್ತ್ವವನ್ನು ಖಂಡಿಸುತ್ತಿದ್ದ, ಮತ್ತು ಕೆಲವೊಮ್ಮೆ ವ್ಯಂಗ್ಯೋಕ್ತಿಗಳ ಮೂಲಕ ಅದನ್ನು ನಿಂದಿಸುತ್ತಿದ್ದ.

ಒಂದು ದಿನ ಶ್ರೀರಾಮಕೃಷ್ಣರು ನರೇಂದ್ರನಿಗೆ ಅದ್ವೈತದಲ್ಲಿ ಬರುವ ಜೀವ-ಬ್ರಹ್ಮರ ಐಕ್ಯದ ಬಗ್ಗೆ ಅನೇಕ ವಿಷಯ ತಿಳಿಸಿದರು, ನರೇಂದ್ರನು ಎಲ್ಲವನ್ನೂ ಕೇಳಿದರೂ ಅರ್ಥಮಾಡಿಕೊಳ್ಳಲಿಲ್ಲ. ನಂತರ ಹಾಜರಾನ ಹತ್ತಿರ ಹೋಗಿ ಈ ವಿಷಯವನ್ನು ಚರ್ಚಿಸುತ್ತಾ ಹಾಸ್ಯ ಮಾಡತೊಡಗಿದ, 'ಇದೆಂದಿಗಾದರೂ ಆಗಲು ಸಾಧ್ಯವೆ? ಈ ಮಡಕೆಯೂ ದೇವರಂತೆ, ಈ ಲೋಟವೂ ದೇವರಂತೆ, ನಾವು ಏನನ್ನೆಲ್ಲ ನೋಡುತ್ತೇವೆಯೋ ಅದೆಲ್ಲ ದೇವರಂತೆ!' ಇಬ್ಬರೂ ಜೋರಾಗಿ

ನಗುತ್ತಿರುವಾಗ ಶ್ರೀರಾಮಕೃಷ್ಣರು ಬಂದು, 'ಏನು ಮಾತನಾಡುತ್ತಿರುವಿರಿ?' ಎಂದು ಕೇಳುತ್ತಾ ನರೇಂದ್ರನನ್ನು ಪ್ರೀತಿಯಿಂದ ಸ್ಪರ್ಶಿಸಿದರು. ಆ ಅದ್ಭುತ ದಿವ್ಯಸ್ಪರ್ಶದಿಂದ ಒಂದು ಕ್ಷಣದಲ್ಲಿಯೇ ನರೇಂದ್ರನಲ್ಲಿ ಭಾವಾಂತರವಾಯಿತು. ಈಗ ಅವನು ಎಲ್ಲೆಲ್ಲಿಯೂ ದೇವರನ್ನೇ ಕಾಣುವಂತಾಯಿತು. ಕ್ರಮೇಣ ಭಗವಂತನಲ್ಲದೆ ಈ ವಿಶ್ವದಲ್ಲಿ ಬೇರೇನೂ ಇಲ್ಲವೇ ಇಲ್ಲ ಎಂದು ಅವನಿಗೆ ಸ್ಪಷ್ಟವಾಯಿತು. ಈ ಭಾವದಲ್ಲಿ ಕೆಲವು ಕಾಲವಿದ್ದ ಮೇಲೆ ಈ ಜಗತ್ತು ಸ್ವಪ್ನದಂತೆ ಕಂಡಿತು. ಈ ಸ್ಥಿತಿಯಲ್ಲಿಯೇ ಸ್ವಲ್ಪ ಹೊತ್ತು ಕಳೆದ ನಂತರ ಸಾಮಾನ್ಯ ಸ್ಥಿತಿಗೆ ಬಂದಾಗ ನರೇಂದ್ರನಿಗೆ ಇದೆಲ್ಲವೂ ಅದ್ವೈತ ಜ್ಞಾನದ ಸೂಚಕವೆಂದು ಸ್ಪಷ್ಟವಾಗಿ, ಶಾಸ್ತ್ರಗಳಲ್ಲಿ ಹೇಳಿರುವುದು ಸತ್ಯವೆಂದು ಪ್ರಮಾಣೀಕೃತವಾಯಿತು. ಅಂದಿನಿಂದ ನರೇಂದ್ರನು ಎಂದೂ ಅದ್ವೈತ ಸತ್ಯದ ಬಗ್ಗೆ ಸಂದೇಹಪಡಲಿಲ್ಲ. *('ಶ್ರೀರಾಮಕೃಷ್ಣ ಲೀಲಾ ಪ್ರಸಂಗ'ದಿಂದ)*

ಶ್ರೀರಾಮಕೃಷ್ಣರು ಅನೇಕ ಸಂದರ್ಭಗಳಲ್ಲಿ ನರೇಂದ್ರನಾಥನಿಗೆ '**ಅಷ್ಟಾವಕ್ರ ಗೀತೆ**'ಯನ್ನು ಓದಿ ಕೇಳಿಸಲು ಹೇಳುತ್ತಿದ್ದರು. ಅವರ ಮತ್ತೊಬ್ಬ ಶಿಷ್ಯ ಇದನ್ನು ಓದಲು ತೆಗೆದುಕೊಂಡಾಗ ಅವರು ನಿರಾಕರಿಸಿ, ನರೇಂದ್ರನಾಥನದು ಜ್ಞಾನಮಾರ್ಗವಾದ್ದರಿಂದ ಅವನೇ ಇದಕ್ಕೆ ಅರ್ಹ ಎಂದು ಹೇಳುತ್ತಿದ್ದರು. ಶ್ರೀರಾಮಕೃಷ್ಣರು ಅದ್ವೈತ ಸಾಧನೆಯ ಬಗ್ಗೆ ತೋತಾಪುರಿ ಎಂಬ ಸಂನ್ಯಾಸಿಯಿಂದ ದೀಕ್ಷೆ ಪಡೆದು, ಕೇವಲ ಮೂರು ದಿನಗಳಲ್ಲಿ ಸಿದ್ಧಿಯನ್ನು ಹೊಂದಿದರು. ಅವರು ನಿರ್ಗುಣ ನಿರಾಕಾರದ ಅದ್ವೈತ ಸಾಧನೆಯ ಸಮಾಧಿ ಸ್ಥಿತಿಯಲ್ಲಿ ಬಹುಕಾಲ ನೆಲೆನಿಂತದ್ದನ್ನು ಕಂಡ ತೋತಾಪುರಿಗೆ ಆಶ್ಚರ್ಯವಾಗಿ, ಅವರನ್ನು ಶಿಷ್ಯನೆಂದು ತಿಳಿದವನು ಅವರಿಂದಲೇ ಶಿಷ್ಯತ್ವವನ್ನು ಪಡೆಯಬೇಕಾಯಿತು. ಶ್ರೀರಾಮಕೃಷ್ಣರ ಸಾಧನಾವಧಿಯ ಎಷ್ಟೋ ಸಂದರ್ಭಗಳಲ್ಲಿ ಅವರು ಇತರ ವಸ್ತು-ವ್ಯಕ್ತಿಗಳಲ್ಲಿ ತಾದಾತ್ಮ್ಯಭಾವವನ್ನು ಹೊಂದಿ ಜೀವ-ಬ್ರಹ್ಮರ ಐಕ್ಯದ ಪ್ರತಿಪಾದನೆ ಮಾಡಿದಂತಹ ಘಟನೆಗಳನ್ನು ಇಲ್ಲಿ ಸ್ಮರಿಸಬಹುದು. ಒಮ್ಮೆ ಅವರು ಉದ್ಯಾನದಲ್ಲಿ ಸೊಂಪಾಗಿ ಬೆಳೆದ ಹುಲ್ಲಿನ ಜೊತೆ ತಾದಾತ್ಮ್ಯ ಹೊಂದಿರಲು, ಅದರ ಮೇಲೆ ಒಬ್ಬ ವ್ಯಕ್ತಿ ನಡೆದಾಗ ಅದು ಅವರ ಎದೆಯ ಮೇಲೆಯೇ ನಡೆದಂತೆ ಭಾಸವಾಗಿ ತೀವ್ರ ವೇದನೆಯನ್ನು ಅನುಭವಿಸಿದರು. ಹೀಗೆ ಚಿಟ್ಟೆಯಲ್ಲಿ, ಅಂಬಿಗನಲ್ಲಿ ಮತ್ತು ಎಲ್ಲೆಲ್ಲೂ ಭಗವಂತನನ್ನೇ ಕಾಣುತ್ತಿದ್ದರು. 'ಏಕಮೇವಾದ್ವಿತೀಯ' - ಈ ಸ್ಥಿತಿ ಜ್ಞಾನಮಾರ್ಗಿಗಳು ಪಡೆಯಬೇಕಾದ ಉನ್ನತ ಅವಸ್ಥೆ. ನೇತಿ ನೇತಿ ಮಾರ್ಗವನ್ನು ಅನುಸರಿಸಿ, ಅಂದರೆ 'ಇದಲ್ಲ, ಇದಲ್ಲ' ಎನ್ನುತ್ತಾ ಕೊನೆಗೆ 'ಇತಿ ಇತಿ' ಎಂದು ಎಲ್ಲೆಲ್ಲೂ ಭಗವಂತನನ್ನೇ ಕಾಣುವುದು, ಜೀವ-ಬ್ರಹ್ಮನ ಅಭೇದವನ್ನು ಪ್ರತಿಪಾದಿಸುವುದೇ ಅದ್ವೈತ ತತ್ತ್ವ.

'**ಅಷ್ಟಾವಕ್ರ ಸಂಹಿತೆ**' ಅದ್ವೈತವಾದವನ್ನು ವಿವರಿಸುವ ಪ್ರಮುಖ ಗ್ರಂಥಗಳಲ್ಲೊಂದು. ಇಲ್ಲಿ 'ನೇತಿ ನೇತಿ' ಮಾರ್ಗವನ್ನು ಅವಲಂಬಿಸಿ ಬ್ರಹ್ಮಜ್ಞಾನದ ಮಹತ್ವವನ್ನು ವಿವರಿಸಲಾಗಿದೆ. ಈ ಗ್ರಂಥವು ಗುರು-ಶಿಷ್ಯ ಸಂವಾದ ರೂಪದಲ್ಲಿದ್ದು, ಅಷ್ಟಾವಕ್ರ ಮುನಿಗಳು 'ಜನಕ' ಎನ್ನುವ ಶಿಷ್ಯನಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿರುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಮಹಾಭಾರತದ ವನಪರ್ವದಲ್ಲಿ ಈ ಕಥೆ ಬರುತ್ತದೆ. ಅಷ್ಟಾವಕ್ರ ಮುನಿಗಳ ಶಿಷ್ಯನಾದ ಜನಕ ಯಾರೆಂಬುದು ಸರಿಯಾಗಿ ತಿಳಿದಿಲ್ಲ. ಅಷ್ಟಾವಕ್ರ ಮುನಿಯ ತಂದೆ-ತಾಯಿ ಕಹೋಡ ಮತ್ತು ಸುಜಾತೆ. ಅಷ್ಟಾವಕ್ರ ಇನ್ನೂ ತನ್ನ ತಾಯಿಯ ಗರ್ಭದಲ್ಲಿರುವಾಗಲೇ ತಂದೆಯಿಂದ ವೇದ ಪಾಠಗಳನ್ನು ಕೇಳುತ್ತಲೇ ಅವುಗಳನ್ನೆಲ್ಲಾ ಕಲಿಯುತ್ತಾನೆ. ಆದರೆ, ತನ್ನ ತಂದೆಯ ವೇದ ಪಾಠದಲ್ಲಿರುವ ತಪ್ಪುಗಳನ್ನು ಗಮನಿಸಿ ಅದನ್ನು ತಂದೆಗೆ ತಿಳಿಸಲು, ಅವನು ಕೋಪದಿಂದ ಗರ್ಭದಲ್ಲಿರುವ ಮಗುವಿಗೆ ಅಷ್ಟಾವಕ್ರನಾಗಿ ಜನಿಸುವಂತೆ ಶಾಪ ನೀಡುತ್ತಾನೆ. ಮಗುವು ಹುಟ್ಟಿದಾಗ ಅದು ಎಂಟು ಬಗೆಯ ವಿಕಲತೆಗಳಿಂದ ಕೂಡಿದ್ದರಿಂದ, ಅದಕ್ಕೆ ಅಷ್ಟಾವಕ್ರ ಎಂದೇ ನಾಮಕರಣ ಮಾಡಲಾಗುತ್ತದೆ. ಕಾಲಾಂತರದಲ್ಲಿ ಮಗುವಿಗೆ ೧೨ ವರ್ಷವಾದಾಗ ಒಂದು ಪ್ರಸಂಗದಲ್ಲಿ ತನ್ನ ತಂದೆಯಿಂದಲೇ ಶಾಪ ವಿಮೋಚನೆ ಹೊಂದಿ, ಅದರ ಅಂಗಾಂಗಗಳೆಲ್ಲ ಸರಿಹೋದವು. ಆದರೆ, ಹೆಸರು ಮಾತ್ರ ಹಾಗೆಯೇ ಉಳಿಯಿತು.

ಶ್ರೀರಾಮಕೃಷ್ಣರು ಅನೇಕ ಸಂದರ್ಭಗಳಲ್ಲಿ ತಮ್ಮ ಅಂತರಂಗ ಶಿಷ್ಯ ಮತ್ತು ಭಕ್ತರಿಗೆ ಅದ್ವೈತ ತತ್ತ್ವವನ್ನು ಅತ್ಯಂತ ಸರಳ ಉದಾಹರಣೆಯ ಮೂಲಕ ಮನದಟ್ಟು ಮಾಡಿಸುತ್ತಾರೆ. ಸಮನ್ವಯಾಚಾರ್ಯರಾದ ಶ್ರೀರಾಮಕೃಷ್ಣರ ವಿಶಿಷ್ಟತೆ ಎಂದರೆ, ಅವರು ಅದ್ವೈತ-ದ್ವೈತ-ವಿಶಿಷ್ಟಾದ್ವೈತ ಎಲ್ಲವನ್ನೂ ಸತ್ಯವೆಂದು ತಿಳಿಸಿ, ಅವುಗಳು ಪರಬ್ರಹ್ಮನನ್ನು ಪಡೆಯಲು ಇರುವ ವಿವಿಧ ಹಂತಗಳೆಂದು ಪ್ರತಿಪಾದಿಸಿದ್ದು, ಅವರು ಎಲ್ಲಾ ವಿಧದ ಸಾಧಕರನ್ನು ತಮ್ಮ ತಮ್ಮ ಸಾಧನೆಗಳಲ್ಲಿ ಮುಂದುವರಿಯುವಂತೆ ಪ್ರೇರೇಪಿಸಿ, ಅವರು ಹಂತ ಹಂತವಾಗಿ ಪರಿಪೂರ್ಣತೆಯನ್ನು ಪಡೆಯಲು ಸಹಕರಿಸುತ್ತಿದ್ದರು. ಈಗ ಅವರ ಬೋಧನೆಯ ಬೆಳಕಿನಲ್ಲಿ **ಅಷ್ಟಾವಕ್ರ ಸಂಹಿತೆ**ಯ ಕೆಲವು ಅಂಶಗಳನ್ನು ಈಗ ಅವಲೋಕಿಸೋಣ.

### ೧. ಅನಿತ್ಯ ವಸ್ತುಗಳ ಮೇಲಿನ ಅನುರಾಗವನ್ನು ಮನಸ್ಸಿನಿಂದ ಕಿತ್ತೊಗೆಯಬೇಕು

ಶ್ರೀರಾಮಕೃಷ್ಣರ ಉಪದೇಶಾಮೃತ ಲೋಕಕ್ಕೆಲ್ಲ ಪಸರಿಸುವಂತೆ ಮಾಡಿರುವ ಮಹೇಂದ್ರನಾಥ ಗುಪ್ತ ಎರಡನೆಯ ಬಾರಿ ಶ್ರೀರಾಮಕೃಷ್ಣರನ್ನು ಭೇಟಿಯಾಗಲು ಹೋದಾಗ, ಮಾತಿನ ಸಂದರ್ಭದಲ್ಲಿ ಹೀಗೆ ಪ್ರಶ್ನಿಸುತ್ತಾನೆ- 'ಏನು ಮಾಡಿದರೆ ಭಗವಂತನ ಕಡೆ ಮನಸ್ಸು ಹರಿಯಲಾರಂಭಿಸುತ್ತದೆ?' ಇದಕ್ಕೆ ಶ್ರೀರಾಮಕೃಷ್ಣರು, ಭಗವಂತನ ನಾಮಗುಣಕೀರ್ತನೆಯನ್ನು ಸರ್ವದಾ ಮಾಡುತ್ತ, ಸತ್ಸಂಗ, ಏಕಾಂತವಾಸ, ಧ್ಯಾನ ಮತ್ತು ಸದಸದ್ವಿಚಾರ ಮಾಡಲು ಉಪದೇಶಿಸುತ್ತಾರೆ. 'ಧ್ಯಾನವನ್ನು ಅಂತರ್ಯದಲ್ಲೋ, ಏಕಾಂತ ಸ್ಥಳದಲ್ಲೋ, ನಿಬಿಡ ಅರಣ್ಯದಲ್ಲೋ ಮಾಡಬೇಕು, ಸತತ ಸದಸದ್ವಿಚಾರ ಮಾಡುತ್ತಿರಬೇಕು - ಭಗವಂತನೊಬ್ಬನೇ ಸತ್, ನಿತ್ಯವಸ್ತು; ಉಳಿದುದೆಲ್ಲಾ ಅಸತ್, ಅನಿತ್ಯವಸ್ತು ಎಂದು. ಹೀಗೆ ವಿಚಾರ

ಮಾಡುತ್ತಾ ಅನಿತ್ಯ ವಸ್ತುಗಳ ಮೇಲಿನ ಅನುರಾಗವನ್ನು ಕೊನೆಗೆ ಮನಸ್ಸಿನಿಂದ ಕಿತ್ತೊಗೆಯಬೇಕು.''

ಬ್ರಹ್ಮಜ್ಞಾನಾರ್ಥಿಯಾಗಿ ಬಂದ ಜನಕನು ಅಷ್ಟಾವಕ್ರಮುನಿಗಳ ಬಳಿ ಹೀಗೆ ವಿನಂತಿಸಿಕೊಳ್ಳುತ್ತಾನೆ , 'ಹೇ ಪ್ರಭು, ಜ್ಞಾನವನ್ನು ಹೇಗೆ ಪಡೆಯುವುದು? ಮುಕ್ತಿಯನ್ನು ಹೊಂದುವುದು ಹೇಗೆ? ಮತ್ತು ವೈರಾಗ್ಯ ಹೇಗೆ ಉಂಟಾಗುತ್ತದೆ? ದಯವಿಟ್ಟು ಇದನ್ನು ತಿಳಿಸಿ.' ಆಗ ಮುನಿಗಳು ಶಿಷ್ಯನ ಮೇಲಿನ ಕರುಣೆಯಿಂದ ಹೀಗೆ ಹೇಳುತ್ತಾರೆ :

**ಮುಕ್ತಿಮಿಚ್ಛಸಿ ಚೇತ್ತಾತ ವಿಷಯಾನ್ವಿಷವತ್ತ್ಯಜ ।**
**ಕ್ಷಮಾರ್ಜವದಯಾತೋಷ ಸತ್ಯಂ ಪೀಯೂಷವದ್ಭಜ ॥** *(೧.೨)*

'ಎಲೈ ಮಗುವೇ, ಮುಕ್ತಿಯನ್ನು ಇಚ್ಛಿಸುವುದಾದರೆ ವಿಷಯವನ್ನು ವಿಷದಂತೆ ತ್ಯಜಿಸು ಮತ್ತು ಕ್ಷಮೆ-ನಿಷ್ಠೆ-ದಯೆ-ತೃಪ್ತಿ ಮತ್ತು ಸತ್ಯವನ್ನು ಅಮೃತದಂತೆ ಭಜಿಸು.'

### ೨. ನಾನು-ನನ್ನದು- ಇವೆರಡೇ ಅಜ್ಞಾನಕ್ಕೆ ಮೂಲ

ಅಜ್ಞಾನ ಎಂದರೇನು? ಶ್ರೀರಾಮಕೃಷ್ಣರ ಮಾತಿನಂತೆ,''ನಾನು-ನನ್ನದು ಇವೆರಡೇ ಅಜ್ಞಾನಕ್ಕೆ ಮೂಲ. 'ನನ್ನ ಮನೆ', 'ನನ್ನ ಹಣ', 'ನನ್ನ ಪಾಂಡಿತ್ಯ', 'ನನ್ನ ಐಶ್ವರ್ಯ' - ಎಂಬ ಈ ಭಾವ ಅಜ್ಞಾನದಿಂದ ಜನಿಸುತ್ತದೆ. ಮೃತ್ಯುವನ್ನು ಸರ್ವದಾ ನೆನದುಕೊಳ್ಳುವುದು ಒಳ್ಳೆಯದು. ಸತ್ತ ಮೇಲೆ ಯಾವುದೂ ಹಿಂದೆ ಬಾರದು.'' *(ಶ್ರೀರಾಮಕೃಷ್ಣ ವಚನವೇದ, ಭಾಗ೧, ಪು.೩೭)* ನಾನು-ನನ್ನದು ಎನ್ನುವ ಮಮಕಾರವೇ ನಮ್ಮ ಬಂಧನಕ್ಕೆ ಕಾರಣ. ಮನುಷ್ಯ ಎಲ್ಲಿಯವರೆಗೆ ಈ ಸುಳಿಯಲ್ಲಿ ಸಿಕ್ಕಿರುತ್ತಾನೆಯೋ ಅಲ್ಲಿಯವರೆಗೆ ಅವನಿಗೆ ಈ ಜನನ-ಮರಣದ ಚಕ್ರದಿಂದ ಬಿಡುಗಡೆಯಿಲ್ಲ. ಅದೆಷ್ಟು ಜನ್ಮಗಳನ್ನು ಕಳೆದರೂ ನಮಗೆ ಈ ಸಂಸಾರದ ವ್ಯಾಮೋಹ ಸವೆಯದಿರುವುದು ಆಶ್ಚರ್ಯವೇ ಸರಿ ! ಅಷ್ಟಾವಕ್ರ ಮುನಿಗಳು ಹೇಳುತಾರೆ:

**ರಾಜ್ಯಂ ಸುತಾಃ ಕಲತ್ರಾಣಿ ಶರೀರಾಣಿ ಸುಖಾನಿ ಚ ।**
**ಸಂಸಕ್ತಸ್ಯಾಪಿ ನಷ್ಟಾನಿ ತವ ಜನ್ಮನಿ ಜನ್ಮನಿ ॥** *(೧೦.೬)*

'ಈ ರಾಜ್ಯ, ಮಕ್ಕಳು, ಪತ್ನಿಯರು, ಶರೀರಗಳು ಮತ್ತು ಸುಖಗಳಿಗೆ ನೀನು ಜನ್ಮ-ಜನ್ಮಾಂತರಗಳಿಂದ ಅಂಟಿಕೊಂಡಿದ್ದರೂ ಅವುಗಳನ್ನು ಕಳೆದುಕೊಳ್ಳುತ್ತಾ ಬಂದಿರುವೆ.' ಹೀಗೆ ನಾವು ಪ್ರತಿ ಜನ್ಮದಲ್ಲೂ ನಾನು-ನನ್ನದು ಎಂದು ಮೆರೆಯುತ್ತಾ ಅವುಗಳನ್ನು ಅತ್ಯಂತ ಪ್ರೀತಿಯಿಂದ ಕಂಡರೂ ಸಹ ಅವುಗಳು ಶಾಶ್ವತವಾಗಿ ನಮ್ಮ ಬಳಿ ಇರುವುದಿಲ್ಲ. ನಮ್ಮ ಈ ಶರೀರ ಶಾಶ್ವತವಲ್ಲದ್ದರಿಂದ ಪ್ರತಿ ಜನ್ಮ-ಮರಣದಲ್ಲೂ ನಾವು ಅದನ್ನು ಪಡೆದುಕೊಂಡು ಕಳೆದುಕೊಳ್ಳುತ್ತಲೇ ಇರುತ್ತೇವೆ. ಇಂತಹ ಅನಿತ್ಯ ವಸ್ತುಗಳ ಮೇಲೆ ನಾವು ಏಕೆ ಅಂಟಿಕೊಂಡು ಬಾರಿ ಬಾರಿಗೂ ದುಃಖಪಡಬೇಕು?

### ೩. ಐಂದ್ರಜಾಲಿಕನೇ ಸತ್ಯ - ಆತನ ಇಂದ್ರಜಾಲ ಅನಿತ್ಯ

ಜ್ಞಾನಿಗಳ ಸಿದ್ಧಾಂತ, **'ಬ್ರಹ್ಮ ಸತ್ಯ ಜಗತ್ ಮಿಥ್ಯಾ.'** ಜ್ಞಾನಿಗಳು ಈ ಜಗತ್ತನ್ನು ಸ್ವಪ್ನದಂತೆ ಕಾಣುತ್ತಾರೆ. ಅವರ ಮತ ಈ ಜಗತ್ತು ಅನಿತ್ಯ ಮತ್ತು ಬ್ರಹ್ಮವೊಂದೇ ನಿತ್ಯ ಎನ್ನುವುದು. ಜ್ಞಾನಿಯು ತನ್ನ ಜ್ಞಾನಖಡ್ಗದಿಂದ ಎಲ್ಲವನ್ನೂ ಕತ್ತರಿಸಿ ಹಾಕುತ್ತಾನೆ. ಶ್ರೀರಾಮಕೃಷ್ಣರು ಈ ಬಗ್ಗೆ ವಿವರಿಸುತ್ತಾ, ''ಜ್ಞಾನಿ ಎಲ್ಲವನ್ನೂ ಒಮ್ಮೆಗೇ ನೋಡುತ್ತಾನೆ, ಭಗವಂತ, ಮಾಯೆ, ಜೀವ-ಜಗತ್ತು ಎಲ್ಲವನ್ನೂ. ಆತನಿಗೆ ಕಂಡುಬರುತ್ತದೆ, ವಿದ್ಯಾಮಾಯೆ, ಅವಿದ್ಯಾಮಾಯೆ, ಜೀವ-ಜಗತ್ತು ಇವೆಲ್ಲ ಇವೆ, ಅದೇ ಸಮಯದಲ್ಲಿ ಇಲ್ಲ ಎಂಬುದಾಗಿ. ಎಲ್ಲಿಯವರೆಗೆ ಅವೆಲ್ಲ ಇರುತ್ತವೆ? ಜ್ಞಾನಖಡ್ಗದಿಂದ ಅವೆಲ್ಲವನ್ನೂ ಕತ್ತರಿಸಿ ಹಾಕಿದ ನಂತರ ಏನೂ ಇರದು. ಆಗ ತನ್ನ ಸ್ವಂತ ಅಹಂ ಕೂಡ ಐಂದ್ರಜಾಲಿಕನ ಇಂದ್ರಜಾಲದ ಹಾಗೆ ಮಿಥ್ಯೆಯಾಗಿ ಕಂಡುಬರುತ್ತದೆ. ಇದೆಲ್ಲ ಕೇವಲ ಇಂದ್ರಜಾಲ ಎಂದು ಸಾವಿರ ಸಲ ನಿನಗೆ ಅನ್ನಿಸಬಹುದು. ಆದರೆ, ನಾವು ಇನ್ನೂ ಮಾಯೆಯ ಅಧೀನದಲ್ಲಿಯೇ ಇರುತ್ತೇವೆ. ಬ್ರಹ್ಮಜ್ಞಾನದ ನಂತರವೇ ನಾವು ನಿಜವಾಗಿ ಸ್ವತಂತ್ರರಾಗುತ್ತೇವೆ ಮತ್ತು ಆಗ ಮಾತ್ರವೇ ಎಲ್ಲವೂ ಇಂದ್ರಜಾಲವಾಗಿ ತೋರಿಬರುತ್ತದೆ, ಇಲ್ಲದಿದ್ದರೆ ಇಲ್ಲ'' *(ವಚನವೇದ೧, ಪು.೯೯೭)* ಎಂದು ಎಚ್ಚರಿಸುತ್ತಾರೆ.

ಅಷ್ಟಾವಕ್ರ ಮುನಿಗಳು ಬ್ರಹ್ಮಜ್ಞಾನಿಯು ಈ ಜಗತ್ತನ್ನು ಕಾಣುವ ಬಗೆಯನ್ನು ತಿಳಿಸುತ್ತಾ -

**ಅಹೋ ಚಿನ್ಮಾತ್ರಮೇವಾಹಮಿಂದ್ರಜಾಲೋಪಮಂ ಜಗತ್ ।**
**ಅತೋ ಮಮ ಕಥಂ ಕುತ್ರ ಹೇಯೋಪಾದೇಯಕಲ್ಪನಾ ॥** *(೭.೫)*

'ನಾನು ನಿಜವಾಗಿಯು ಚಿನ್ಮಾತ್ರ (ಆತ್ಮಸ್ವರೂಪ)ವಾಗಿದ್ದೇನೆ. ಈ ಜಗತ್ತು ಐಂದ್ರಜಾಲದಂತಿದೆ. ಆದ್ದರಿಂದ ನನ್ನಲ್ಲಿ ಸ್ವೀಕರಿಸುವ ಅಥವಾ ನಿರಾಕರಿಸುವ ಯೋಚನೆಯಾದರೂ ಎಲ್ಲಿ ಮತ್ತು ಹೇಗೆ ಬರಲು ಸಾಧ್ಯ?' ಬ್ರಹ್ಮಜ್ಞಾನವನ್ನು ಪಡೆದ ಮೇಲೆ ಯಾವುದೇ ದ್ವಂದ್ವವಿರುವುದಿಲ್ಲ. ಯಾವಾಗಲೂ ತನ್ನ ಸ್ವಸ್ವರೂಪದಲ್ಲಿ ನೆಲೆನಿಂತ ಅದ್ವೈತವಾದಿಗೆ ಈ ಜಗತ್ತು ಐಂದ್ರಜಾಲದಂತೆ ಮಿಥ್ಯವಾಗಿ ಅಥವಾ ಕನಸಿನಂತೆ ಕಾಣುತ್ತದೆ.

ಶ್ರೀರಾಮಕೃಷ್ಣರು ಇದನ್ನು ಜ್ಞಾನಿ ರೈತನೊಬ್ಬ ಕಂಡ ಕನಸಿನ ಉದಾಹರಣೆಯೊಂದಿಗೆ ವಿವರಿಸುತ್ತಾರೆ. ಒಬ್ಬ ಜ್ಞಾನಿಯಾದ ರೈತ ಒಂದು ರಾತ್ರಿ ತಾನು ರಾಜನಾಗಿದ್ದಂತೆ, ಮತ್ತು ಅವನಿಗೆ ಏಳು ಜನ ಮುದ್ದಾದ ಮಕ್ಕಳು ಇದ್ದಂತೆ ಕನಸು ಕಂಡ. ಮರುದಿನ ಕನಸಿನಿಂದ ಎಚ್ಚೆತ್ತಾಗ ತನ್ನ ಏಕೈಕ ಪುತ್ರ ಅನಾರೋಗ್ಯದಿಂದ ಸತ್ತ ಎಂಬ ಸಮಾಚಾರವನ್ನು ಕೇಳಿಯೂ ಯಾವುದೇ ಪ್ರತಿಕ್ರಿಯೆ ತೋರಲಿಲ್ಲ. ಈ ಬಗ್ಗೆ ಅವನನ್ನು ವಿಚಾರಿಸಿದಾಗ, ತಾನು ರಾತ್ರಿ ಕಂಡ ಕನಸನ್ನು ವಿವರಿಸುತ್ತಾ, 'ನಾನು ಈಗ ಈ ಒಂದು ಮಗುವಿಗಾಗಿ ಅಳಬೇಕೋ ಅಥವಾ ಕನಸಿನಲ್ಲಿ ಕಂಡ ಏಳು ಜನ ರಾಜಕುಮಾರರಿಗಾಗಿ ಅಳಬೇಕೋ ತಿಳಿಯುತ್ತಿಲ್ಲ' ಎಂದು ಉತ್ತರಿಸಿದ. ಜ್ಞಾನಿಗಳಿಗೆ ಜಾಗೃತ್ ಅವಸ್ಥೆಯು ಸ್ವಪ್ನದಂತೆ ತೋರುತ್ತದೆ. ಸ್ವಪ್ನ ಮತ್ತು ಜಾಗೃತ್ ಅವಸ್ಥೆಗಳಲ್ಲಿಯೂ ಅವರು ಅಭೇದವನ್ನೇ ಕಾಣುತ್ತಾರೆ.

ಅಷ್ಟಾವಕ್ರ ಮುನಿಗಳು ಸಂಸಾರವನ್ನು ಹೇಗೆ ಕಾಣಬೇಕು ಎನ್ನುವುದನ್ನು ವಿವರಿಸುತ್ತಾರೆ:

**ಸ್ವಪ್ನೇಂದ್ರ ಜಾಲವತ್ ಪಶ್ಯ ದಿನಾನಿ ತ್ರೀಣಿ ಪಂಚ ವಾ ।**
**ಮಿತ್ರಕ್ಷೇತ್ರಧನಾಗಾರದಾರದಾಯಾದಿ ಸಂಪದಃ ॥** *(೧೦.೨)*

'ಮಿತ್ರ, ಸ್ಥಾನ, ಧನ, ಮನೆ, ಮಡದಿ, ಉಡುಗೊರೆ ಮುಂತಾದವುಗಳು ಸ್ವಪ್ನದಂತೆ ಅಥವಾ ಐಂದ್ರಜಾಲದಂತೆ, ಕೇವಲ ಮೂರು –ಐದು ದಿನಗಳು ಮಾತ್ರ ಉಳಿಯುವಂತಹವು ಎಂಬಂತೆ ನೋಡು.'

### ೪. ಬಿರುಗಾಳಿಗೆ ಸಿಕ್ಕ ಎಂಜಲೆಲೆಯಂತೆ ಇರಿ

ಈ ಅನಿತ್ಯ ಸಂಸಾರದಲ್ಲಿ ನಾವು ಹೇಗಿರಬೇಕು ಎನ್ನುವುದನ್ನು ತಿಳಿಸುತ್ತಾ ಶ್ರೀರಾಮಕೃಷ್ಣರು ಹೇಳುತ್ತಾರೆ ''ಬಿರುಗಾಳಿಗೆ ಸಿಕ್ಕಿದ ಎಂಜಲೆಲೆಯಂತೆ ಸಂಸಾರದಲ್ಲಿ ಇರಿ. ಗಾಳಿ ಅದನ್ನು ಒಮ್ಮೆ ಮನೆಯ ಒಳಕ್ಕೂ, ಒಮ್ಮೊಮ್ಮೆ ತಿಪ್ಪೆಗುಂಡಿಗೋ ಎತ್ತಿ ಬಿಸಾಡುತ್ತದೆ. ಗಾಳಿ ಯಾವ ಕಡೆ ಬೀಸುವುದೊ ಅದು ಆ ಕಡೆಗೆ ಹೋಗುತ್ತದೆ. ಒಮ್ಮೊಮ್ಮೆ ಒಳ್ಳೆಯ ಸ್ಥಳಗಳಿಗೆ, ಒಮ್ಮೊಮ್ಮೆ ಮಲಿನ ಸ್ಥಳಗಳಿಗೆ ಹೋಗಿ ಬೀಳುತ್ತದೆ. ಈಗ ನಿನ್ನನ್ನು ಸಂಸಾರದಲ್ಲಿ ಬಿಸಾಡಿದ್ದಾನೆ; ಒಳ್ಳೆಯದು, ಈಗ ಇಲ್ಲೇ ಇರು. ಮತ್ತೆ ಯಾವಾಗ ಆತ ನಿನ್ನನ್ನು ಇಲ್ಲಿಂದ ಎತ್ತಿಕೊಂಡು ಹೋಗಿ ಇದಕ್ಕಿಂತಲೂ ಮೇಲಾದ ಜಾಗದಲ್ಲಿ ಬಿಸಾಡುವನೊ, ಆಗ ಏನಾಗಬೇಕೊ ಅದು ಆಗುತ್ತದೆ.''

ನಿಜವಾದ ಜ್ಞಾನಿಯು ಸಂಸಾರದಲ್ಲಿದ್ದರೂ ಅಥವಾ ನಿರ್ಜನ ಅರಣ್ಯದಲ್ಲಿದ್ದರೂ ಅವನಿಗೆ ಭೇದವಿರುವುದಿಲ್ಲ. ಅವನು ತನ್ನ ಆತ್ಮ ಭಾವದಲ್ಲಿ ನೆಲೆನಿಂತು ಸದಾ ಅಭೇದವನ್ನೇ ಕಾಣುತ್ತಿರುತ್ತಾನೆ. ಅಷ್ಟಾವಕ್ರ ಮುನಿ ಇಂತಹ ಜ್ಞಾನಿಯ ಲಕ್ಷಣಗಳನ್ನು ತಿಳಿಸುತ್ತಾರೆ:

**ನಿರ್ವಾಸನೋ ನಿರಾಲಂಬಃ ಸ್ವಚ್ಛಂದೋ ಮುಕ್ತಬಂಧನಃ ।**
**ಕ್ಷಿಪ್ತಃ ಸಂಸ್ಕಾರವಾತೇನ ಚೇಷ್ಟತೇ ಶುಷ್ಕಪರ್ಣವತ್ ॥** *(೧೮.೨೧)*

'ಜ್ಞಾನಿಯು ತನ್ನ ಪೂರ್ವ ಸಂಸ್ಕಾರಗಳೆನ್ನುವ ಗಾಳಿಯಲ್ಲಿ ಸಿಕ್ಕಿ ವಾಸನಾರಹಿತನಾಗಿ, ಸ್ವತಂತ್ರನಾಗಿ, ಸ್ವಚ್ಛಂದವಾಗಿ ಮತ್ತು ಬಂಧನಗಳಿಂದ ಮುಕ್ತವಾಗಿ ಒಣಗಿದ ಎಲೆಯಂತೆ ಅಲೆಯುತ್ತಾನೆ.'

### ೫. ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ

'ಮನಸ್ಸಿದ್ದಂತೆ ಮಹಾದೇವ.' ಹೌದು, ಶ್ರೀರಾಮಕೃಷ್ಣರು ಹೇಳುವಂತೆ ಮನಸ್ಸೇ ಎಲ್ಲಕ್ಕೂ ಕಾರಣವಾಗಿದೆ. ದೈವಕೃಪೆ, ಗುರುಕೃಪೆ ಇದ್ದರೂ ಮನುಷ್ಯ ತನ್ನ ಮನಸ್ಸಿನ ಕೃಪೆಯಿಲ್ಲದಿದ್ದರೆ ಏನೂ ಸಾಧಿಸಲಾರ ಎಂದು ಹಿರಿಯರು ಹೇಳುತ್ತಾರೆ. ಒಮ್ಮೆ ಕೇಶವಚಂದ್ರ ಏರ್ಪಡಿಸಿದ್ದ ಸಂತೋಷ ನೌಕಾವಿಹಾರದಲ್ಲಿ ಶ್ರೀರಾಮಕೃಷ್ಣರು ಬ್ರಾಹ್ಮಭಕ್ತನೊಬ್ಬನಿಗೆ ಉಪದೇಶಿಸುತ್ತಾರೆ: ''ಎಲ್ಲಾ ಮನಸ್ಸಿನ ಮೇಲೆ ನಿಂತಿದೆ. ಮನಸ್ಸೇ ಬಂಧನಕ್ಕೆ ಕಾರಣ, ಮನಸ್ಸೇ ಮುಕ್ತಿಗೆ ಕಾರಣ. ಮನಸ್ಸಿಗೆ ಯಾವ ಬಣ್ಣ ಕೊಟ್ಟರೆ ಅದು ಆ ಬಣ್ಣ ಧರಿಸುತ್ತದೆ. ಉದಾಹರಣೆಗೆ ಅಗಸನ ಮನೆಯಿಂದ ತಂದ ಬಟ್ಟೆ. ಕೆಂಪು ಬಣ್ಣದಲ್ಲಿ ಅದ್ದಿದರೆ ಕೆಂಪು, ನೀಲಿ ಬಣ್ಣದಲ್ಲಿ ಅದ್ದಿದರೆ ನೀಲಿ.. ನೀನು ಕೆಟ್ಟವರೊಡನೆ ಬೆಳೆದರೆ ನಿನ್ನ ನಡೆನುಡಿ ವ್ಯವಹಾರ ಎಲ್ಲವೂ ಅವರಂತೆ ಆಗಿಬಿಡುತ್ತದೆ. ಭಕ್ತರ ಸಹವಾಸದಲ್ಲಿ ಬೆಳೆದರೆ, ಮನಸ್ಸು ಭಗವಚ್ಚಿಂತನೆ, ಭಗವಂತನನ್ನು ಕುರಿತ ಕಥೆ ಇವುಗಳಲ್ಲೇ ನಿರತವಾಗಿರುತ್ತದೆ.''

''ಮನಸ್ಸೇ ಎಲ್ಲಕ್ಕೂ ಕಾರಣ, ಮನುಷ್ಯನ ಒಂದು ಪಕ್ಕದಲ್ಲಿ ಹೆಂಡತಿ, ಇನ್ನೊಂದು ಪಕ್ಕದಲ್ಲಿ ಮಗಳು. ಒಬ್ಬಳಿಗೆ ಒಂದು ವಿಧ, ಇನ್ನೊಬ್ಬಳಿಗೆ ಇನ್ನೊಂದು ವಿಧ ಪ್ರೀತಿ ತೋರಿಸುತ್ತಾನೆ. ಆದರೆ, ಮನಸ್ಸು ಮಾತ್ರ ಒಂದೇ ಒಂದು. ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ. 'ನಾನು ಮುಕ್ತಪುರುಷ. ಸಂಸಾರದಲ್ಲಿ ಇದ್ದರೆ ತಾನೆ ಏನು, ಅರಣ್ಯದಲ್ಲಿ ಇದ್ದರೆ ತಾನೆ ಏನು, ನನಗೆಲ್ಲಿಯ ಬಂಧನ? ನಾನು ಭಗವಂತನ ಮಗು, ರಾಜಾಧಿರಾಜನ ಮಗು. ನನಗಾವುದರ ಬಂಧನ?' ಎಂದು ಯಾರು ಸತತ ಚಿಂತಿಸುತ್ತಾನೊ, ಆತ ಮುಕ್ತನಾಗಿ ಬಿಡುತ್ತಾನೆ. ಒಂದು ಪಕ್ಷ ಹಾವೇನಾದರೂ ಕಡಿದರೆ 'ನನ್ನನ್ನು ವಿಷ ಏನೂ ಮಾಡಲಾರದು' ಎಂಬುದಾಗಿ ದೃಢವಾಗಿ ನಂಬಿದರೆ ಆಗ ಅದರಿಂದ ಪಾರಾಗಿಬಿಡಬಹುದು. ಹಾಗೆ 'ನಾನು ಬದ್ಧನಲ್ಲ, ಮುಕ್ತ' ಎಂದು ದೃಢವಾಗಿ ನಂಬಿದರೆ ಹಾಗೆ ಆಗಿಬಿಡಬಹುದು – ಮುಕ್ತನೇ ಆಗಿ ಬಿಡಬಹುದು.''

ಅಷ್ಟಾವಕ್ರ ಮುನಿಗಳು ಈ ಬಗ್ಗೆ ವಿವರಿಸುತ್ತಾರೆ:

**ಮುಕ್ತಾಭಿಮಾನೀ ಮುಕ್ತೋ ಹಿ ಬದ್ಧೋ ಬದ್ಧಾಭಿಮಾನ್ಯಪಿ ।**
**ಕಿಂವದಂತೀಹ ಸತ್ಯೇಯಂ ಯಾ ಮತಿಸ್ಸಾ ಗತಿರ್ಭವೇತ್ ॥** *(೧.೧೧)*

'ಯಾರು ತನ್ನನ್ನು ಮುಕ್ತನೆಂದು ಭಾವಿಸುತ್ತಾರೊ ಅವರು ಮುಕ್ತರಾಗುತ್ತಾರೆ ಮತ್ತು ಯಾರು ತನ್ನನ್ನು ಬದ್ಧರೆಂದು ಭಾವಿಸುತ್ತಾರೋ ಅವರು ಬದ್ಧರಾಗುತ್ತಾರೆ. 'ಹೇಗೆ ಮತಿಯಿರುವುದೋ ಹಾಗೆ ಗತಿ' ಎನ್ನುವ ಈ ನಾಣ್ನುಡಿ ಸತ್ಯವಾಗಿದೆ.'

ಬಂಧ–ಮುಕ್ತಿಗಳೆರಡೂ ನಮ್ಮಲ್ಲಿಯೇ ಇರುವುದರಿಂದ ನಾವು ಏನು ಇಚ್ಛಿಸುತ್ತೇವೆಯೋ ಅದೇ ದೊರೆಯುತ್ತದೆ. ಎಲ್ಲವೂ ನಮ್ಮ ಪೂರ್ಣ ಪ್ರಯತ್ನವನ್ನು ನಿರ್ಧರಿಸುತ್ತದೆ. ಸ್ವಾಮಿ ವಿವೇಕಾನಂದರು ಮನುಷ್ಯನಲ್ಲಿ ಅಡಗಿರುವ ದೈವತ್ವವನ್ನು ಪ್ರಕಾಶಪಡಿಸಲು ಕರೆ ನೀಡಿದ್ದಾರೆ: ''ನಮ್ಮ ಏಳ್ಗೆಗೆ ನಾವೇ ಕಾರ್ಯೋನ್ಮುಖರಾಗೋಣ. ದೇಹಾಭಿಮಾನ ಬಂಧನಗಳಿಂದ ಮುಕ್ತಿ ಪಡೆದು ನಾವು ವಿಶ್ವಮಾನವ, ದೇವಮಾನವರಾಗೋಣ, ಕೊನೆಗೆ ದೇವತೆಗಳೇ ಆಗೋಣ. ಮುಕ್ತಿಯೆಂಬುದು ಕೇವಲ ಸಂನ್ಯಾಸಿಗಳಿಗೆ ಕಟ್ಟಿಟ್ಟ ಬುತ್ತಿಯಲ್ಲ. ಸಂಸಾರಿಯಾದರೂ ಬ್ರಹ್ಮಜ್ಞಾನವನ್ನು ಪಡೆಯಬಹುದು.'' ಆದರೆ, ಎಲ್ಲವೂ ಮನಸ್ಸನ್ನು ಅವಲಂಬಿಸಿರುತ್ತದೆ. ತ್ಯಾಗವಿಲ್ಲದೆ ಏನನ್ನೂ ಪಡೆಯಲು ಸಾಧ್ಯವಿಲ್ಲವಾದ್ದರಿಂದ ಮಾನಸಿಕ ಮತ್ತು ಕ್ರಮೇಣ ಬಾಹ್ಯ ತ್ಯಾಗಕ್ಕೆ ಸಿದ್ಧರಾಗಬೇಕು. ಆದ್ದರಿಂದಲೇ ಶ್ರೀರಾಮಕೃಷ್ಣರು ತಮ್ಮ ಉಪದೇಶದುದ್ದಕ್ಕೂ ಕಾಮ–ಕಾಂಚನಾಸಕ್ತಿಯನ್ನು ತ್ಯಾಗ ಮಾಡಬೇಕೆಂದು ಪ್ರೇರೇಪಿಸುತ್ತಾರೆ.

### ೬. ಮೊದಲನೆಯದು ಬೇಕಾಗಿದ್ದರೆ ಎರಡನೆಯದನ್ನು ಸರಿಸಬೇಡವೆ?

ತ್ಯಾಗ ಎಂದರೆ ಪ್ರಾಪಂಚಿಕರಲ್ಲಿ ಆತಂಕ ಮೂಡಿಸುವ ಪದ. ತ್ಯಾಗ–ವೈರಾಗ್ಯ ಎನ್ನುವುದು ಕೇವಲ ಸಂನ್ಯಾಸಿಗಳಿಗೆ ಸಂಬಂಧಿಸಿದೆ ಎಂದು ಹಲವರು ಅಭಿಪ್ರಾಯಪಡುತ್ತಾರೆ. ನಿಜವಾಗಿಯೂ ತ್ಯಾಗ–ವೈರಾಗ್ಯಗಳಿಲ್ಲದಿದ್ದರೆ ಯಾರೂ ಏನನ್ನು ಸಾಧಿಸಲಾಗುವುದಿಲ್ಲ.

ತಾಯಿ ತನ್ನ ಸ್ವಂತ ಸುಖಗಳನ್ನು ತ್ಯಾಗಮಾಡಿ ಕುಟುಂಬ ಪೋಷಿಸುತ್ತಾಳೆ. ಅದರಂತೆಯೇ ಪ್ರಪಂಚದಲ್ಲಿ ಪ್ರತಿಯೊಂದು ಜೀವಿಯು ತ್ಯಾಗವನ್ನೇ ಅವಲಂಬಿಸಿದೆ.

ಶ್ರೀರಾಮಕೃಷ್ಣರ ಉಪದೇಶಗಳ ಸಾರ 'ಕಾಮಕಾಂಚನ ತ್ಯಾಗ.' ಈ ಬಗ್ಗೆ ಅವರು ಹೇಳುತ್ತಾ, ''ಮೊದಲು ಕಾಮ-ಕಾಂಚನ ತ್ಯಾಗವನ್ನು ಮಾನಸಿಕವಾಗಿ ಮಾಡಬೇಕು. ಬಳಿಕ ಭಗವತ್ ಕೃಪೆಯಿಂದ ಮಾನಸಿಕವಾಗಿಯೂ ಬಾಹ್ಯಕವಾಗಿಯೂ ತ್ಯಾಗ ಮಾಡಲು ಆಗುತ್ತದೆ. ಕಲ್ಕತ್ತದ ಜನರಿಗೆ (ಪ್ರಾಪಂಚಿಕರಿಗೆ) ಹೇಳುವಂತೆಯೂ ಇಲ್ಲ, ಎಲ್ಲವನ್ನೂ ಭಗವಂತನಿಗೆ ತ್ಯಾಗ ಮಾಡಿಬಿಡಿ ಎಂಬುದಾಗಿ. ಅವರಿಗೆ ಹೇಳಬೇಕು, ಮಾನಸಿಕವಾಗಿ ತ್ಯಾಗ ಮಾಡಿ ಅಂತ.'' ಕಾಶೀಪುರದಲ್ಲಿ ಶ್ರೀರಾಮಕೃಷ್ಣರು ಒಮ್ಮೆ ನರೇಂದ್ರನೊಡನೆ ಮಾತನಾಡುವಾಗ ನರೇಂದ್ರನು ತ್ಯಾಗದ ವಿಷಯವನ್ನು ಪ್ರಸ್ತಾಪಿಸಿದ. ಅವರು ಮೃದು ಸ್ವರದಿಂದ, ''ತ್ಯಾಗ ಆವಶ್ಯಕ. ಒಂದನ್ನು ಇನ್ನೊಂದರ ಮೇಲೆ ಇಟ್ಟಿದ್ದರೆ, ಮೊದಲನೆಯದು ಬೇಕಾದರೆ ಎರಡನೆಯದನ್ನು ಸರಿಸಬೇಡವೆ? ಒಂದನ್ನು ತೆಗೆಯದೆ ಇನ್ನೊಂದು ದೊರೆಯುವುದೆ?.. ಮೊದಲು ಮಾನಸಿಕವಾಗಿ ತ್ಯಜಿಸಬೇಕು'' ಎಂದು ಹೇಳುತ್ತಾರೆ.

ಅಷ್ಟಾವಕ್ರ ಸಂಹಿತೆಯಲ್ಲಿಯೂ ಮಾನಸಿಕ ತ್ಯಾಗದ ಮಹತ್ವವನ್ನು ವಿವರಿಸಲಾಗಿದೆ:

**ಹಾತುಮಿಚ್ಛತಿ ಸಂಸಾರಂ ರಾಗೀ ದುಃಖಜಿಹಾಸಯಾ ।**
**ವೀತರಾಗೋ ಹಿ ನಿರ್ದುಃಖಸ್ತಸ್ಮಿನ್ನಪಿ ನ ಖಿದ್ಯತಿ ॥** *(೧೬.೯)*

'ಸಂಸಾರಾಸಕ್ತನು ದುಃಖ ನಿವಾರಣೆಗಾಗಿ ಸಂಸಾರವನ್ನು ತ್ಯಜಿಸಲು ಬಯಸುತ್ತಾನೆ. ಆದರೆ, ವೀತರಾಗಿ ಅಂದರೆ ಸಂಸಾರಾಸಕ್ತಿಯಿಲ್ಲದವನು ದುಃಖದಿಂದ ಮುಕ್ತನಾಗಿ ಸಂಸಾರದಲ್ಲಿ ಇದ್ದರೂ ವ್ಯಥೆಪಡುವುದಿಲ್ಲ.' ಯಾರು ಮನಸ್ಸಿನಿಂದ ಸಂಸಾರಾಸಕ್ತಿಯನ್ನು ತ್ಯಜಿಸಿರುವರೋ ಅವರೇ ಮುಕ್ತರು. ಅವರು ಎಲ್ಲಾ ದ್ವಂದ್ವಗಳನ್ನು ಮೀರಿರುತ್ತಾರೆ. ಆದ್ದರಿಂದ ಸದಾ ಸುಖಿಗಳಾಗಿರುತ್ತಾರೆ ಮತ್ತು ಬ್ರಹ್ಮಾನಂದದಲ್ಲಿ ಉನ್ಮತ್ತರಾಗಿರುತ್ತಾರೆ.

**ಅಂತಸ್ತ್ಯಕ್ತ ಕಷಾಯಸ್ಯ ನಿರ್ದ್ವಂದ್ವಸ್ಯ ನಿರಾಶಿಷಃ ।**
**ಯದೃಚ್ಛಯಾಗತೋ ಭೋಗೋ ನ ದುಃಖಾಯ ನ ತುಷ್ಟಯೇ ॥**

'ಯಾರು ಪ್ರಪಂಚದ ಮೇಲಿರುವ ಆಸಕ್ತಿಯನ್ನು ಮಾನಸಿಕವಾಗಿ ತ್ಯಜಿಸಿರುತ್ತಾರೋ ಅವರು ದ್ವಂದ್ವಗಳನ್ನು ಮೀರಿರುತ್ತಾರೆ ಮತ್ತು ಯಾರು ಆಸೆಗಳಿಂದ ಮುಕ್ತರಾಗಿರುತ್ತಾರೋ ಅವರಿಗೆ ವಿಧಿಗನುಗುಣವಾಗಿ ಬರುವ ಸುಖ-ದುಃಖದ ಅನುಭವಗಳು ಏನೂ ಮಾಡುವುದಿಲ್ಲ.'

ಮೊದಲು 'ಆಸಕ್ತಿ' ಎನ್ನುವ ಬೇರನ್ನು ನಾಶಮಾಡಿದರೆ ಸಂಸಾರ ವೃಕ್ಷ ತಾನಾಗಿಯೇ ನಾಶವಾಗುತ್ತದೆ. ಹೊರಗಿರುವ ರೆಂಬೆ-ಕೊಂಬೆಗಳನ್ನು ಕತ್ತರಿಸುವುದರಿಂದ ಪುನಃ ಚಿಗುರುವ ಸಂಭವವಿರುತ್ತದೆ. ಆದರೆ, ಭೂಮಿಯ ಒಳಗಿರುವ ಬೇರನ್ನು ನಾಶಮಾಡಿದರೆ ಆ ಭಯವಿರುವುದಿಲ್ಲ. ಆದ್ದರಿಂದ ಬಾಹ್ಯ ತ್ಯಾಗ ಒಂದೇ ಸಾಲದು, ಮಾನಸಿಕ ತ್ಯಾಗವೇ ಮುಖ್ಯವಾಗಿ ಬೇಕಾಗಿರುವುದು ಎನ್ನುತ್ತಾರೆ ಶ್ರೀರಾಮಕೃಷ್ಣರು.

**೭. ಗಾಳಿ ಬೀಸುವವರೆಗೆ ಮಾತ್ರವೇ ಬೀಸಣಿಗೆಯ ಆವಶ್ಯಕತೆ**

ಒಮ್ಮೆ ಶ್ರೀರಾಮಕೃಷ್ಣರು ವಿದ್ಯಾಸಾಗರನೊಡನೆ ಕರ್ಮತ್ಯಾಗದ ವಿಷಯವಾಗಿ ಹೇಳುತ್ತಾರೆ, ''ಭಗವಂತನಲ್ಲಿ ಅನುರಾಗ ಉಂಟಾಯಿತು ಎಂದರೆ ಈ ಕರ್ಮಗಳ ವಿಷಯವಾಗಿ ಅತಿಯಾಗೇನೂ ತಲೆಗೆ ಹಚ್ಚಿಕೊಳ್ಳಬೇಕಾಗಿಲ್ಲ. ಗಾಳಿ ಬೀಸುವವರೆಗೆ ಮಾತ್ರವೇ ಬೀಸಣಿಗೆಯ ಆವಶ್ಯಕತೆ. ತಂಗಾಳಿ ಬೀಸಲಾರಂಭಿಸಿತು ಎಂದರೆ ಬೀಸಣಿಗೆಯನ್ನು ಕೆಳಕ್ಕೆ ಇಟ್ಟುಬಿಡಬಹುದು, ಬಳಿಕ ಬೀಸಣಿಗೆಯ ಆವಶ್ಯಕತೆಯೇನಿದೆ?'' ಮತ್ತೊಂದು ಸಂದರ್ಭದಲ್ಲಿ ಅವರು ಶ್ರೀಶ ಎನ್ನುವ ಭಕ್ತನಿಗೆ ಕರ್ಮವನ್ನು ಎಲ್ಲಿಯವರೆಗೆ ಮಾಡಬೇಕಾಗುತ್ತದೆ ಎನ್ನುವುದನ್ನು ವಿವರಿಸುತ್ತಾ ಹೀಗೆ ಹೇಳುತ್ತಾರೆ, ''ಭಗವಂತನ ಸಾಕ್ಷಾತ್ಕಾರವಾದೊಡನೆ ಎಲ್ಲಾ ಕರ್ಮಗಳು ತಾನಾಗಿಯೇ ನಿಂತು ಹೋಗುತ್ತವೆ. ಆಗ ಮನುಷ್ಯ ಪಾಪ-ಪುಣ್ಯಗಳಿಗೆ ಅತೀತನಾಗುತ್ತಾನೆ. ಕಾಯಿ ತಲೆದೋರಿದೊಡನೆಯೇ ಹೂವು ಉದುರಿಹೋಗುತ್ತದೆ. ಕಾಯಿ ಬಿಡುವುದಕ್ಕೋಸ್ಕರ ಹೂವು ಉಂಟಾಗುವುದು... ಪರಮಹಂಸಾವಸ್ಥೆಯಲ್ಲಿ ಎಲ್ಲಾ ಕರ್ಮಗಳೂ ನಿಂತು ಹೋಗಿಬಿಡುತ್ತವೆ. ಪೂಜೆ, ಜಪ, ತರ್ಪಣ, ಸಂಧ್ಯಾವಂದನೆ ಇವೆಲ್ಲಾ ಈ ಅವಸ್ಥೆಯಲ್ಲಿ ಕೇವಲ ಮನಸ್ಸಿನ ಮೂಲಕ. ಯೋಗ, ಬಾಹ್ಯ ಕರ್ಮಗಳನ್ನು ಅವರು ಮಾಡಿದರೂ ಮಾಡಬಹುದು, ಇಚ್ಛೆ ಬಂದರೆ - ಲೋಕಶಿಕ್ಷಣಕ್ಕಾಗಿ.''

ಈ ಮೇಲಿನ ಉಪದೇಶಗಳನ್ನು ಪರಿಶೀಲಿಸಿದಾಗ, ಜ್ಞಾನ ಅಥವಾ ಭಕ್ತಿಯ ಉನ್ನತ ಅವಸ್ಥೆಯಲ್ಲಿ ಮಾತ್ರ ಸಾಧಕನು ಕರ್ಮತ್ಯಾಗಕ್ಕೆ ಅರ್ಹನಾಗುತ್ತಾನೆಂದು ತಿಳಿಯುತ್ತದೆ. ಬ್ರಹ್ಮಜ್ಞಾನವನ್ನು ಪಡೆದ ನಂತರವೇ ಬಾಹ್ಯಕರ್ಮಗಳು ನಿಂತುಹೋಗುತ್ತವೆ ಎನ್ನುವುದನ್ನು ಅತ್ಯಂತ ಸಾಮಾನ್ಯ ಉದಾಹರಣೆಯಾದ ಬೀಸಣಿಗೆ ಮುಂತಾದ ಉಪಮೆಗಳಿಂದ ಶ್ರೀರಾಮಕೃಷ್ಣರು ತಿಳಿಸುತ್ತಾರೆ.

ಅಷ್ಟಾವಕ್ರ ಮುನಿಗಳು ಜೀವನ್ಮುಕ್ತನ ಲಕ್ಷಣಗಳನ್ನು ಹೇಳುತ್ತಾರೆ:

**ಕೃತ್ಯಂ ಕಿಮಪಿ ನೈವಾಸ್ತಿ ನ ಕಾಪಿ ಹೃದಿ ರಂಜನಾ ।**
**ಯಥಾ ಜೀವನಮೇವೇಹ ಜೀವನ್ಮುಕ್ತಸ್ಯ ಯೋಗಿನಃ ॥** *(೧೮.೧೩)*

'ಜೀವನ್ಮುಕ್ತ ಯೋಗಿಗೆ ಯಾವುದೇ ಕರ್ತವ್ಯವಾಗಲಿ ಅಥವಾ ಹೃದಯದಲ್ಲಿ ಯಾವುದೇ ಆಸಕ್ತಿಯಾಗಲಿ ಇರುವುದಿಲ್ಲ. ಅವನ ಕಾರ್ಯಗಳು ಪ್ರಸ್ತುತ ಜೀವನಕ್ಕೆ ಮಾತ್ರ ಅನ್ವಯಿಸಿದ್ದು, ಅವು ಅವನ ಹಿಂದಿನ ಕರ್ಮಗಳ ಫಲವಾಗಿರುತ್ತವೆ ಅಷ್ಟೆ.'

**೮. ಪರಿಸಮಾಪ್ತಿ - 'ಅನಂತ ಮತ - ಅನಂತ ಪಥ'**

ಶ್ರೀರಾಮಕೃಷ್ಣರ ಅವತಾರದ ವಿಶಿಷ್ಟತೆಗಳಲ್ಲಿ ಅತ್ಯಂತ ಮಹತ್ವವಾದುದೆಂದರೆ ಅವರು ಸಮನ್ವತೆಯನ್ನು ಬೋಧಿಸಿರುವುದು. ಅವರ ಮಾತಿನಲ್ಲಿಯೇ ವಿವರಿಸುವುದಾದರೆ ''ನಾನು ಸಾಕಾರ-

ನಿರಾಕಾರ ಎಲ್ಲವನ್ನೂ ಅನುಮೋದಿಸುತ್ತೇನೆ.'' *(ವಚನವೇದ, ಭಾಗ ೨, ಪು.೩೮)* ಅವರು ತಮ್ಮ ಸಾಧನೆಯಲ್ಲಿ ಎಲ್ಲಾ ಮತಗಳನ್ನು ಅನುಸರಿಸಿ, ಸಿದ್ಧಿ ಪಡೆದು ಸರ್ವಮತ ಸಮನ್ವಯಾಚಾರ್ಯರು ಎಂದೇ ವಿಖ್ಯಾತರಾಗಿದ್ದಾರೆ. ಸಾಕಾರ-ನಿರಾಕಾರ ಎರಡೂ ಸತ್ಯವೆನ್ನುವುದನ್ನು ಅವರು ಸಚ್ಚಿದಾನಂದ ಸಾಗರದಲ್ಲಿ ನೀರು ಹೆಪ್ಪುಗಟ್ಟಿ ಮಂಜುಗಡ್ಡೆಯಾದಾಗ ಅದು ಸಾಕಾರವನ್ನು, ಮತ್ತು ಮಂಜುಗಡ್ಡೆ ಕರಗಿ ನೀರಾದಾಗ ಅದು ನಿರಾಕಾರವನ್ನು ಸೂಚಿಸುತ್ತದೆ ಎನ್ನುವ ಉಪಮೆಯಿಂದ ಸ್ಪಷ್ಟಪಡಿಸುತ್ತಾರೆ.

ಅವರು ಒಮ್ಮೆ ಪಂಡಿತನೊಬ್ಬನಿಗೆ ಈ ತತ್ತ್ವವನ್ನು ತಿಳಿಸುತ್ತಾ, ''ಭಗವಂತನ ಸಾಕ್ಷಾತ್ಕಾರವನ್ನು ಅಭಾವಮುಖ ಅಂದರೆ 'ನೇತಿ, ನೇತಿ', ಭಾವಮುಖ ಅಂದರೆ 'ಇತಿ, ಇತಿ' – ಈ ಎರಡೂ ಮಾರ್ಗಗಳಿಂದ ಪಡೆಯಬಹುದು. ಮೊದಲನೆಯದು, ವಿವೇಕ ವೈರಾಗ್ಯಗಳಿಂದ ಕೂಡಿದ ಅಭಾವಸೂಚಕ ಮಾರ್ಗ. ಎರಡನೆಯದು, ಭಾವಭಕ್ತಿಗಳಿಂದ ಕೂಡಿದ ಭಾವಸೂಚಕ ಮಾರ್ಗ. ನೀನು ಅಭಾವಸೂಚಕ ಮಾರ್ಗವನ್ನು ಅಂದರೆ ಜ್ಞಾನಮಾರ್ಗವನ್ನು ಪ್ರಚಾರ ಮಾಡುತ್ತಿದ್ದೀಯೆ. ಆದರೆ, ಅದು ಬಹಳ ಕಠಿಣ ಸನ್ನಿವೇಶವನ್ನು ತಂದೊಡ್ಡುತ್ತದೆ. ಅಲ್ಲಿ ಈತ ಗುರು, ಆತ ಶಿಷ್ಯ ಎಂಬ ಭೇದವೇ ಇರದು. ಜನಕರಾಜನ ಹತ್ತಿರ ಶುಕದೇವ ಬ್ರಹ್ಮಜ್ಞಾನಾರ್ಥಿಯಾಗಿ ಹೋದ. ಜನಕ 'ನೀನು ಮೊದಲೇ ಗುರುದಕ್ಷಿಣೆ ಕೊಟ್ಟು ಬಿಡಬೇಕು. ಬ್ರಹ್ಮಜ್ಞಾನ ದೊರೆತ ನಂತರ ನೀನು ಗುರುದಕ್ಷಿಣೆ ಕೊಡುವ ಹಾಗೆ ಇಲ್ಲ. ಏಕೆಂದರೆ ಆಗ ಗುರು-ಶಿಷ್ಯ ಭೇದವಿರದು!' ಎಂದು ಹೇಳಿದ '' ಎಂದರು.

ಅಷ್ಟಾವಕ್ರ ಮುನಿಗಳ ಶಿಷ್ಯ ಜನಕನು ಬ್ರಹ್ಮಜ್ಞಾನದ ನಂತರ ಹೇಳುವ ಮಾತುಗಳು ಇಲ್ಲಿ ಉಲ್ಲೇಖನೀಯವಾಗಿದೆ:

**ಕ್ವೋಪದೇಶಃ ಕ್ವ ವಾ ಶಾಸ್ತ್ರಂ ಕ್ವ ಶಿಷ್ಯಃ ಕ್ವ ಚ ವಾ ಗುರುಃ ।**
**ಕ್ವ ಚಾಸ್ತಿ ಪುರುಷಾರ್ಥೋ ವಾ ನಿರುಪಾಧೇಃ ಶಿವಸ್ಯ ಮೇ ॥**

*(೨೦.೧೩)*

'ಪರಿಪೂರ್ಣ ಮತ್ತು ಉಪಾಧಿರಹಿತನಾದವನಿಗೆ ಎಲ್ಲಿಯ ಉಪದೇಶ? ಯಾವ ಶಾಸ್ತ್ರ? ಯಾರು ಶಿಷ್ಯ? ಯಾರು ಗುರು ಮತ್ತು ಪುರುಷಾರ್ಥಗಳಾದರೂ ಎಲ್ಲಿದೆ?'

**ಅಷ್ಟಾವಕ್ರ ಸಂಹಿತೆಯಲ್ಲಿ** ಕೇವಲ ಅದ್ವೈತ-ನಿರಾಕಾರ ತತ್ತ್ವವನ್ನು ಮಾತ್ರ ವಿವರಿಸಲಾಗಿದೆ. ಇಲ್ಲಿ ಸಾಕಾರಕ್ಕಾಗಲಿ ಅಥವಾ ದ್ವೈತ ತತ್ತ್ವಕ್ಕಾಗಲಿ ಸ್ಥಾನವಿಲ್ಲ. ಇದು ಜ್ಞಾನ ಅಥವಾ ವಿಚಾರ ಮಾರ್ಗ. ಜ್ಞಾನಿಯು ಸದಾ ತನ್ನ ವಿವೇಕ-ವೈರಾಗ್ಯಗಳೆನ್ನುವ ಖಡ್ಗಗಳಿಂದ ಸಂಸಾರದ-ಅಜ್ಞಾನದ ಪಾಶವನ್ನು ಕತ್ತರಿಸುತ್ತಾನೆ. 'ಅಹಂ ಬ್ರಹ್ಮಾಸ್ಮಿ' ಎನ್ನುವುದು ಮಾತ್ರವೇ ಇಲ್ಲಿ ಉಸಿರಾಗಿದೆ. ಆತ್ಮಜ್ಞಾನದಿಂದ ತೃಪ್ತನಾದ ಜ್ಞಾನಿಯ ಮನಸ್ಸು ಮುಕ್ತಿಗಾಗಿಯೂ ಹಾತೊರೆಯುವುದಿಲ್ಲ. ಏಕೆಂದರೆ ಜ್ಞಾನಿಯು ಯಾವಾಗಲೂ ಮುಕ್ತನಾಗಿಯೇ ಇರುತ್ತಾನೆ. ಬ್ರಹ್ಮಜ್ಞಾನಿಯು ತನ್ನ ಉನ್ನತ ಅವಸ್ಥೆಯಲ್ಲಿ ನೆಲೆನಿಂತಾಗ ಯಾವ ಭೇದವನ್ನು ಕಾಣದಿರುವುದರಿಂದ, ಅವನಿಗೆ ಗುರು-ಉಪದೇಶ-ಶಾಸ್ತ್ರ-ಮಾಯೆ-ಬಂಧನ-ಸಂಸಾರ-ಜೀವ-ಬ್ರಹ್ಮ ಎಲ್ಲವೂ ಸಮನಾಗಿಯೇ ತೋರುತ್ತದೆ ಅಥವಾ ಎಲ್ಲವೂ ಸ್ವಪ್ನದಂತೆ ಮಿಥ್ಯವಾಗಿರುತ್ತದೆ. ಆದರೆ ಬ್ರಹ್ಮ ಜ್ಞಾನವನ್ನು ಅಷ್ಟು ಸುಲಭವಾಗಿ ಪಡೆಯಲು ಸಾಧ್ಯವೆ?

ಶ್ರೀರಾಮಕೃಷ್ಣರು ಈ ಬಗ್ಗೆ ತಿಳಿಸುತ್ತಾ, ''ಜ್ಞಾನಯೋಗ ಈ ಯುಗಕ್ಕೆ ಬಹಳ ಕಠಿಣ. ಮೊದಲನೆಯದಾಗಿ ಜೀವ ಅನ್ನಗತ ಪ್ರಾಣ. ಎರಡನೆಯದಾಗಿ ಆಯುಸ್ಸು ಕಡಿಮೆ. ಮೂರನೆಯದಾಗಿ ದೇಹಬುದ್ಧಿ ಏನು ಮಾಡಿದರೂ ಹೋಗಲೊಲ್ಲದು. ದೇಹಬುದ್ಧಿ ಹೋಗದ ಹೊರತು ಬ್ರಹ್ಮಜ್ಞಾನ ದೊರೆಯುವ ಹಾಗೇ ಇಲ್ಲ. ಜ್ಞಾನಿ ಹೇಳುತ್ತಾನೆ 'ನಾನೇ ಆ ಬ್ರಹ್ಮ; ನಾನು ಶರೀರವಲ್ಲ' ಬಾಯಾರಿಕೆ, ರೋಗ, ಶೋಕ, ಸುಖ, ದುಃಖಗಳ ಬೋಧೆ ಇದ್ದುದೇ ಆದರೆ, ನೀನು ಜ್ಞಾನಿಯಾಗುವ ಬಗೆ ಹೇಗೆ? ಕೈಗೆ ಒಂದು ಕಡೆ ಮುಳ್ಳು ಚುಚ್ಚಿಕೊಂಡು ರಕ್ತ ಪ್ರವಾಹೋಪಾದಿಯಲ್ಲಿ ಹರಿಯುತ್ತಾ ಬಹಳ ನೋವು ಕೊಡುತ್ತಿರಬಹುದು; ಆದರೂ ಜ್ಞಾನಿಯಾಗಿದ್ದ ಪಕ್ಷದಲ್ಲಿ ನೀನು ಹೇಳಬೇಕಾಗುತ್ತದೆ, 'ಎಲ್ಲಿ ನನ್ನ ಕೈಗೇನೂ ಮುಳ್ಳು ಚುಚ್ಚಿಕೊಂಡಿಲ್ಲವಲ್ಲ, ನನಗೇನೂ ಆಗಿಲ್ಲವಲ್ಲ' ಎಂದು.''

ಆದ್ದರಿಂದ ಅವರು ಈ ಯುಗಕ್ಕೆ ಭಕ್ತಿಯೋಗವೇ ಬಹಳ ಸುಲಭ ಮಾರ್ಗವೆಂದು ತಿಳಿಸುತ್ತಾರೆ. ಜ್ಞಾನಯೋಗ, ಕರ್ಮಯೋಗಗಳ ಮೂಲಕವಾಗಿಯೂ ಅಥವಾ ಬೇರೆ ಯಾವ ಮಾರ್ಗಗಳ ಮೂಲಕವಾಗಿಯೂ ಭಗವಂತನನ್ನು ತಲುಪಬಹುದು, ಆದರೆ ಇವೆಲ್ಲಾ ಬಹಳ ಕಠಿಣವೆಂದು ಉಪದೇಶಿಸುತ್ತಾರೆ. ಅವರು 'ಭಕ್ತಿಯೋಗವೇ ಯುಗಧರ್ಮ' ಎಂದು ಹೇಳುತ್ತಾ, 'ಇದರ ಅರ್ಥ-ಭಕ್ತ ಒಂದು ಗುರಿಯನ್ನು ಮುಟ್ಟುತ್ತಾನೆ; ಜ್ಞಾನಿ, ಕರ್ಮಿಗಳು ಇನ್ನೊಂದು ಗುರಿಯನ್ನು ಮುಟ್ಟುತ್ತಾರೆ ಅಂತೇನಲ್ಲ. ಇದರರ್ಥ, ಯಾರಿಗೆ ಬ್ರಹ್ಮಜ್ಞಾನ ಬೇಕೋ ಆತ ಭಕ್ತಿಮಾರ್ಗವನ್ನು ಅನುಸರಿಸಿದರೂ ಅದೇ ಬ್ರಹ್ಮಜ್ಞಾನ ದೊರೆಯುತ್ತದೆ ಎಂಬುದಾಗಿ. ಭಕ್ತವತ್ಸಲನಾದ ಭಗವಂತ ಇಚ್ಛೆಪಟ್ಟದ್ದೇ ಆದರೆ, ಬ್ರಹ್ಮಜ್ಞಾನವನ್ನು ಕೊಡಬಲ್ಲ'' *(ವಚನವೇದ, ಭಾಗ ೧, ಪು. ೫೦೭)*

ಹೀಗೆ ಶ್ರೀರಾಮಕೃಷ್ಣರು **'ಅನಂತ ಮತ-ಅನಂತ ಪಥ'** ಎಂದು ಪ್ರತಿಪಾದಿಸುತ್ತಾ, ಒಂದೇ ಊರನ್ನು ತಲುಪಲು ಅನೇಕ ಮಾರ್ಗಗಳಿರುವಂತೇ ಮನುಷ್ಯನ ಆಸಕ್ತಿ-ಅಭಿರುಚಿಗಳಿಗೆ ಅನುಗುಣವಾಗಿ ಯಾವ ಸಾಧನೆಯನ್ನಾದರೂ ಏಕನಿಷ್ಠೆಯಿಂದ ಮಾಡಲು ಪ್ರೇರೇಪಿಸುತ್ತಾರೆ. ಸರ್ವ-ಸಮನ್ವಯ ದಿವ್ಯಮೂರ್ತಿಗಳಾದ ಅವರ ಬೋಧನೆಗಳು ಹೀಗೆ ಎಲ್ಲಾ ಕಡೆಯಲ್ಲೂ ಬೆಳಕನ್ನು ನೀಡುತ್ತಿವೆ. ಆ ಪರಮ ಪವಿತ್ರ ದಿವ್ಯ ಪುರುಷನ ಕೃಪಾಬೆಳಕು ನಮ್ಮೆಲ್ಲರ ಅಜ್ಞಾನದ ಅಂಧಕಾರವನ್ನು ನಾಶಮಾಡಲಿ ಎನ್ನುವುದೇ ನಮ್ಮ ಪ್ರಾರ್ಥನೆ. ✷




# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ-೮



**ಆ** ದಿನ ಸಂಜೆ ಬಾಬಾ ಆಶ್ರಮದ ಒಬ್ಬ ಹುಡುಗನ ನಡವಳಿಕೆಯಿಂದ ನೊಂದಿದ್ದರೋ ಏನೋ, ಕೆಲವು ಕ್ಷಣಗಳ ನಂತರ ಹೇಳಿದರು: ''ಆಶ್ರಮದ ಅನಾಥ ಹುಡುಗರಾರೂ ತ್ಯಾಗ, ವೈರಾಗ್ಯಗಳನ್ನು ತಳೆಯಲಿಲ್ಲ. ಯಾರೂ ಠಾಕೂರರ, ಸ್ವಾಮೀಜಿಯವರ ಭಾವವನ್ನು ಸ್ವೀಕರಿಸಲಿಲ್ಲ. ಇದೇಕೆ ಹೀಗೆ ಎಂದು ನನಗೆ ಬಹಳ ದುಃಖವಾಗುತ್ತಿತ್ತು. ಠಾಕೂರರು ನನಗೆ ತೋರಿಸಿಕೊಟ್ಟರು ಹಾಗೂ ತಿಳಿಸಿಕೊಟ್ಟರು, ಅನಾಥ ಮಕ್ಕಳೆಲ್ಲಾ ಒಂದು ಹಿಡಿ ಅನ್ನಕ್ಕಾಗಿ ಬೀದಿ ಬೀದಿ ಸುತ್ತುತ್ತಿದ್ದಾರೆ, ಚಿಂದಿ ಬಟ್ಟೆ ಧರಿಸಿದ್ದಾರೆ. ಅವರು ಇಂತಹ ಉನ್ನತ ವಿಚಾರಗಳನ್ನು ಗ್ರಹಿಸಬಲ್ಲರೆ? ಅವನ್ನು ನೇರ ನೋಡಿದರೂ ಕೂಡ ಗ್ರಹಿಸಬಲ್ಲರೆ? ಅವರಿಗೆ ಬೇಕಾಗಿರುವುದು, ಊಟ, ಬಟ್ಟೆ, ಜೀವನದಲ್ಲಿ ತಮ್ಮ ಕಾಲಿನ ಮೇಲೆ ನಿಲ್ಲಲು ಸಹಾಯವಾಗುವಂತೆ ಒಂದಿಷ್ಟು ಓದು, ಬರಹ ಅಷ್ಟೆ. ಅವರ ಜೀವನ ಹೀಗೆಯೇ ನಡೆಯುತ್ತದೆ. ಆದರೆ ಇಷ್ಟು ದಿನ ಆಶ್ರಮವಾಸ ಮಾಡಿದ್ದರ ಛಾಪು ಸ್ವಲ್ಪವಾದರೂ ಉಳಿದು ಕೊಳ್ಳುತ್ತದೆ.

''ಸಾಮಾನ್ಯ ವಸ್ತುಗಳಿಗಾಗಿ ಯಾರಾದರೂ ಸ್ವಾರ್ಥವನ್ನು ತೋರಿಸಿದರೆ ಬಹಳ ದುಃಖವಾಗುತ್ತದೆ. ನಾನು ಎಂದೂ ಒಂದು ಲವಂಗವನ್ನು ಕೂಡ ಬೇರೆಯವರಿಗೆ ಕೊಡದೆ ತಿಂದವನಲ್ಲ. ಊಟದ ನಂತರ ಲವಂಗಗಳನ್ನು ಇಟ್ಟುಕೊಂಡು ನಿಂತಿರುತ್ತಿದ್ದೆ, ಬಾಯಿ ತೊಳೆದು ಬಂದು ಉಳಿದವರೆಲ್ಲ ಒಂದೊಂದು ಲವಂಗ ಬಾಯಿಗೆ ಹಾಕಿಕೊಳ್ಳುತ್ತಿದ್ದರು. ಎಲ್ಲರದೂ ಮುಗಿದ ಮೇಲೆ ನಾನೂ ಒಂದನ್ನು ಬಾಯಿಗೆ ಹಾಕಿಕೊಳ್ಳುತ್ತಿದ್ದೆ. ಯಾವಾಗಲೂ ಎಲ್ಲರಿಗೂ ನೀಡಿದ ನಂತರವೇ ನಾನು ತಿಂದಿದ್ದೇನೆ. ಎಷ್ಟು ದಿನ ನಾನು ತಿನ್ನದೆ, ಉಡದೆ ಇದ್ದರೂ, ಹುಡುಗರಿಗೆ ತಿನ್ನಿಸಿದ್ದೇನೆ, ಉಡಿಸಿದ್ದೇನೆ! ಇದರಿಂದೆಲ್ಲ ಅವರು ಏನನ್ನೂ ಕಲಿಯುವುದಿಲ್ಲವೆ? ಆದರೆ ಒಬ್ಬಿಬ್ಬರಾದರೂ ಮೂಡಿ ಬಂದಿದ್ದಾರೆ; ತ್ಯಾಗದ ಭಾವಕ್ಕೆ ಅನುಗುಣವಾಗಿ ಕರ್ಮಶಕ್ತಿ!

''ಬಹದ್ದೂರ್ - ಅವನು ಮನುಷ್ಯನಲ್ಲ, ದೇವಶಿಶು. ಸ್ವರ್ಗದಿಂದ, ಹಿಮಾಲಯದಿಂದ ಇಳಿದು ಬಂದಂತಿದ್ದ! ಭೂಮಿಯಲ್ಲಿ ಹೆಚ್ಚು ದಿನ ಉಳಿಯಲಿಲ್ಲ; ಅವನಿಗೆ ಸಾಯುವ ವಯಸ್ಸಾಗಿತ್ತೆ? ಹಾಲು ಕುಡಿಯುವ ಮಗು! ಅವನ ಶರೀರದಲ್ಲಿ ಎಷ್ಟೊಂದು ಸಾಮರ್ಥ್ಯವಿತ್ತು! ಮನಸ್ಸಿನಲ್ಲಿ ಅದೆಂಥ ಶಕ್ತಿಯಿತ್ತು!

''ಅವನು ಕಲಿಯಲು ಎಷ್ಟು ಕಾತರನಾಗಿದ್ದ! ಸರಳ ವಿಶ್ವಾಸ, ಪರೋಪಕಾರ ಮಾಡಲು ಎಂಥ ಆಸಕ್ತಿ! ಮಲಗಿದಲ್ಲಿಂದಲೇ ಎಷ್ಟೊಂದು ಪ್ರಶ್ನೆಗಳನ್ನು ಕೇಳುತ್ತಿದ್ದ - ಮನುಷ್ಯ ಸತ್ತ ಮೇಲೆ ಎಲ್ಲಿಗೆ ಹೋಗು ತ್ತಾನೆ? ಮನುಷ್ಯರು ಏಕೆ ಹುಟ್ಟುತ್ತಾರೆ? ಕೆಲವು ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದೆ, ಇನ್ನು ಕೆಲವಕ್ಕೆ, 'ನೀನು ದೊಡ್ಡವನಾದಾಗ ತಿಳಿದುಕೊಳ್ಳುವೆ' ಎನ್ನುತ್ತಿದ್ದೆ. ಕೆಲವು ದಿನಗಳ ನಂತರ ಅವನು ಕೇಳುತ್ತಿದ್ದ, 'ಬಾಬಾ, ಈಗ ನಾನು ದೊಡ್ಡವನಾಗಿದ್ದೇನೆ. ಅದಕ್ಕೆ ಈಗ ಉತ್ತರ ಹೇಳುವಿರಾ?' ಕೆಲವೊಮ್ಮೆ ಅವನಿಗೆ ಕತೆ ಹೇಳಿ ಮಲಗಿಸುತ್ತಿದ್ದೆ. ಅವನು ಬಹಳ ತುಂಟ; ಅಷ್ಟೇ ಧೈರ್ಯಶಾಲಿ. ಬೇಲೂರು ಮಠಕ್ಕೆ ಅವನನ್ನು ಕರೆದುಕೊಂಡು ಹೋಗಿದ್ದೆ. ಅಲ್ಲಿ ಸಾಮಾನುಗಳನ್ನೆಲ್ಲ ಅಸ್ತವ್ಯಸ್ಥಗೊಳಿಸುತ್ತಿದ್ದ, ಕಿಟಕಿ ಗಾಜುಗಳನ್ನೆಲ್ಲ ಒಡೆದು ಹಾಕುತ್ತಿದ್ದ. ಕೊನೆಗೆ ಸ್ವಾಮೀಜಿ, 'ತಮ್ಮ, ನಿನ್ನ ಆ ಪಹಾಡಿ ಹುಡುಗ ನಿನಗೇ ಚೆನ್ನ!' ಎಂದರು.

''ಇಲ್ಲಿ ರೈತನ ಮಗನೊಬ್ಬ ಮಳೆಗಾಲದ ಪ್ರವಾಹದಲ್ಲಿ ಮುಳುಗಿ ಮೇಲುಸಿರು ಬಿಡುತ್ತಿದ್ದ. ಇದನ್ನ ನೋಡಿದ ಕೂಡಲೇ ಬಹದ್ದೂರ ಒಂದೇ ನೆಗೆತಕ್ಕೆ ಅವನನ್ನು ಮೇಲೆಳೆದು ತಂದು ಕಾಪಾಡಿದ. ಅವನಿಗೆ ಪ್ರಾಣಭಯ ಇರಲಿಲ್ಲ. ಮರದ ಮೇಲಿಂದ 'ಟಪ್' ಎಂದು ಕಲ್ಲೆಸೆಯುತ್ತಿದ್ದ. ಅನೇಕ ಬಾರಿ ಅದು ರೈತರಿಗೆ ತಗಲುತ್ತಿತ್ತು. ರೈತರು ನನಗೆ, 'ದಂಡೀ ಠಾಕೂರ್ (ಮಹಾಸ್ವಾಮಿಗಳೆ), ಅವನನ್ನು ಹಾಗೆ ಮಾಡಲು ಬಿಡಬೇಡಿ.' ಎನ್ನುತ್ತಿದ್ದರು. ನಾನು ಅವನಿಗೆ ಒಮ್ಮೆ ಬುದ್ಧಿ ಹೇಳಿದೆ. ಅವನು ಕೂಡಲೇ ಅದನ್ನು ಅರ್ಥಮಾಡಿಕೊಂಡ.

ಅವನು ಬಹಳ ದುಃಸಾಹಸಿ ಕೂಡ; ಭಾರವಾದ ವಸ್ತುವೊಂದನ್ನು ಮೇಲೆತ್ತುವಾಗ ಅವನ ಎದೆಗೆ ಗಾಯವಾಯಿತು. ಬಹುಶಃ ನರಗಳಿಗೆ ಏಟಾಗಿರಬೇಕು. ಅದರಿಂದಲೇ ಅವನು ಕ್ಷೀಣಿಸತೊಡಗಿದ. ಅವನನ್ನು ಗುಣಪಡಿಸಲು ಎಷ್ಟೊಂದು ಪ್ರಯತ್ನಪಟ್ಟರೂ, ಎಷ್ಟು ಚಿಕಿತ್ಸೆ ಮಾಡಿದರೂ, ಪ್ರಯೋಜನವಾಗಲಿಲ್ಲ. ಎಂಥ ಕಠಿಣ ರೋಗ, ಆದರೂ ತನ್ನ ಕೈಯಿಂದಲೇ ತಿನ್ನಬೇಕು ಎನ್ನುವ ಹಠ ಅವನದು. ಕೊನೆಯ ದಿನದ ಹಿಂದಿನ ದಿನ, ನಾನೇ ಕೈಯಿಂದ ಹಾಲು ಕುಡಿಸಿದೆ. ಕೊನೆಯ ದಿನದಂದು ಬೆಳಿಗ್ಗೆ ಅವನು ಹೇಳಿದ, 'ಬಾಬಾ, ಠಾಕೂರರ ಮಂದಿರಕ್ಕೆ ಹೋಗಬೇಕು.' ನಾನೆಂದೆ, 'ಅದೇನಪ್ಪಾ, ನಿನಗೆ ಇಷ್ಟೊಂದು ಅನಾರೋಗ್ಯ! ಮೊದಲು ಗುಣಮುಖನಾಗು. ಆಮೇಲೆ ಠಾಕೂರರ ಮಂದಿರಕ್ಕೆ ಹೋಗುವಿಯಂತೆ.' ಅದಕ್ಕೆ ಅವನೆಂದ, 'ಇಲ್ಲ, ಬಾಬಾ! ನನ್ನನ್ನು ಠಾಕೂರರ ಮಂದಿರಕ್ಕೆ ಕರೆದುಕೊಂಡು ಹೋಗಿ. ಅಲ್ಲಿಗೆ ಹೋದರೇನೇ ನಾನು ಗುಣಮುಖನಾಗುತ್ತೇನೆ.' ಸರಿ, ಅವನನ್ನು ಮಂದಿರಕ್ಕೆ ಕರೆದುಕೊಂಡು ಹೋದೆ. ಠಾಕೂರರ ಚಿತ್ರವನ್ನು ನೆಟ್ಟ ದೃಷ್ಟಿಯಿಂದ ನೋಡುತ್ತ, 'ಪರಮೇಶ್ವರ, ಪರಮೇಶ್ವರ,' ಎನ್ನತೊಡಗಿದ. ಅದಾದ ಮೇಲೆ ಠಾಕೂರರ ಹೆಸರನ್ನು ಹೇಳುತ್ತಾ ದೇಹ ಬಿಟ್ಟ.

''ಇನ್ನೊಂದು ದಿನ ನಾನಂದುಕೊಂಡೆ, ಇವರೆನ್ನೆಲ್ಲ ನಾನು ಎಷ್ಟೊಂದು ಪ್ರೀತಿಸುತ್ತೇನೆ, ಆದರೂ ಅವರೆಲ್ಲ ನನ್ನನ್ನೇಕೆ ಬಿಟ್ಟು ಹೋಗುತ್ತಾರೆ? ಅವರು ಸ್ವಲ್ಪವೂ ಇತ್ತ ಆಕರ್ಷಿತರಾಗುವುದಿಲ್ಲ. ಒಂದು ಸಾರಿಯೂ ತಿರುಗಿ ನೋಡುವುದಿಲ್ಲ, ಆಶ್ರಮದ ಕಡೆಗೆ ಸ್ವಲ್ಪವೂ ಸೆಳೆತವಿಲ್ಲವೆ? ಠಾಕೂರರು ನನಗೆ ಹೇಳಿದರು, 'ನಿನ್ನನ್ನು ಇನ್ನು ಯಾವ ಮಾಯೆಯೂ ಸ್ಪರ್ಶಿಸಲಾರದು. ನನ್ನ ಪ್ರೇಮ ಜ್ಯೋತಿ ನಿನ್ನನ್ನು ಆವರಿಸಿದೆ. ನೀನು ನನ್ನ ಪ್ರೀತಿಯಿಂದ ತುಂಬಿಕೊಂಡಿರುವೆ. ಸಂಸಾರದ ಮಾಯೆಯಿಂದ ಕೂಡಿದ ಪ್ರೀತಿ ನಿನ್ನನ್ನು ಸ್ಪರ್ಶಿಸುವುದೆ?' ಆಗ ನಾನು ಅದನ್ನು ಅರ್ಥಮಾಡಿಕೊಂಡೆ, ನನ್ನ ಮನಸ್ಸು ಶಾಂತವಾಯಿತು. ಇವರಿದ್ದರೇನು, ಹೋದರೇನು ನನಗೆ? ಯಾರೊಂದಿಗೆ ಎಷ್ಟುದಿನದ ಸಂಬಂಧವೊ! ಒಂದು ದೊಡ್ಡ ತಮಾಷೆಯೆಂದರೆ, ಒಬ್ಬನಲ್ಲ ಒಬ್ಬ 'ಗೋಪಾಲ' ಎಂಬ ಹೆಸರಿನ ಹುಡುಗ ಯಾವಾಗಲೂ ನನ್ನ ಬಳಿ ಇದ್ದೇ ಇರುತ್ತಾನೆ. ಠಾಕೂರರು ಯಶೋದೆ ಹಾಗೂ ಗೋಪಾಲನನ್ನು ತೋರಿಸಿ ಹೇಳಿದ್ದರಲ್ಲ, 'ನೋಡು, ಎಂಥ ಪ್ರೀತಿಯ ಭಾವ!' ''

ಇದೇ ವಿಷಯವಾಗಿ ಬಾಬಾ ಇನ್ನೊಂದು ದಿನ ಹೇಳುತ್ತಿದ್ದರು, ''ಇದರೊಳಗೆ ತಾಯಿ ಯಶೋದೆ ಇದ್ದಾಳೆ, ಗೊತ್ತೇನು? ನಡುನಡುವೆ ಹೊರಬರುತ್ತಾಳೆ. ಅಂದು ನೋಡಲಿಲ್ಲವೆ?''

ಒಂದು ದಿನ ಕತ್ತಲಾದ ಮೇಲೆ ಬಾಬಾ ತಮ್ಮ ಕೋಣೆಯಲ್ಲಿ ಮಂಚದ ಮೇಲೆ ಮಲಗಿ ಹೇಳುತ್ತಿದ್ದಾರೆ, ''ನಾನು ಖೇತ್ರಿಯಲ್ಲಿದ್ದಾಗ ಸ್ವಾಮೀಜಿ ಅಮೆರಿಕದಲ್ಲಿದ್ದರು, ಅವರಿಗೊಂದು ಪತ್ರ ಬರೆದೆ. ರಾತ್ರಿ ೯ ಗಂಟೆಗೆ ಬರೆಯಲು ಕುಳಿತೆ; ಬರೆದು ಮುಗಿಸಿದಾಗ ಬೆಳಕು ಹರಿದಿತ್ತು. ದೇಶ ಯಾವ ಸ್ಥಿತಿಯಲ್ಲಿದೆ, ನಾನೇನು ಮಾಡಬಹುದು – ಇದನ್ನು ತಿಳಿಯಬಯಸಿ ಅವರಿಗೆ ಸ್ಪಷ್ಟವಾಗಿ ಬರೆದೆ. ಅದಕ್ಕೆ ಸ್ವಾಮೀಜಿ ಏನು ಉತ್ತರ ಬರೆಯಬಹುದು ಎಂದು ಆಸೆಯಿಂದ ದಿನ ಎಣಿಸತೊಡಗಿದೆ. 'ನೀನು ಸಂನ್ಯಾಸಿ; ಏಕೆ ಅಷ್ಟೊಂದು ತಲೆಕೆಡಿಸಿಕೊಳ್ಳುತ್ತಿ? ಸಾಧನೆ, ಭಜನೆ, ಶಾಸ್ತ್ರವಿಚಾರ, ಪರಿವ್ರಜನ ಮಾಡಿದರೆ ಸಾಕು. ಅದಕ್ಕೆಲ್ಲ ಕೈಹಾಕಿ 'ಅವ್ಯಾಪರೇಷು ವ್ಯಾಪಾರ' ಮಾಡಲು ಹೋಗಬೇಡ' ಎಂದು ಬರೆದರೆ! ಹಾಗೇನಾದರೂ ಬರೆದಿದ್ದರೆ ಸರಿ ಹೋಗುತ್ತಿತ್ತು. ನಾನು ಯಾರಿಗೂ ಏನನ್ನೂ ಹೇಳದೆ ಭಾರತವನ್ನು ಬಿಟ್ಟು ಹೊರಟುಹೋಗುತ್ತಿದ್ದೆ. ಆಗ ಇನ್ನಾವ ದುಃಖ, ದುರ್ದಸೆಗಳನ್ನೂ ನೋಡಬೇಕಾಗಿರಲಿಲ್ಲ. ಕಾರಕೋರಮ್‌ನಿಂದ ನೇರ ಮಧ್ಯ ಏಷ್ಯಾಗೆ ಹೋಗಿಬಿಡುತ್ತಿದ್ದೆ. ಮೊದಲೇ ನಾನು ಅಲ್ಲಿಗೆ ಹೋಗಬೇಕೆಂದಿದ್ದೆ. ಆದರೆ ನನಗೆ ಪರ್ವತಪ್ರದೇಶದ ದಾರಿಯೆಲ್ಲ ಚೆನ್ನಾಗಿ ತಿಳಿದಿದ್ದರಿಂದ, ಸ್ವಾಮೀಜಿ ತಮ್ಮ ಜೊತೆಗೆ ಪರ್ಯಟನ ಮಾಡಲು ನನ್ನನ್ನು ಪರ್ವತಪ್ರದೇಶದಿಂದ ಕೆಳಗಿಳಿಸಿದರು.

''ಸ್ವಾಮೀಜಿ ಪತ್ರಕ್ಕಾಗಿ ಕಾತರನಾಗಿದ್ದೆ. ಉತ್ತರ ಬಂತು. ಈ ಪತ್ರ 'ಪತ್ರಮಾಲೆ'ಯಲ್ಲಿ ಭಾಗಶಃ ಪ್ರಕಟಿತವಾಗಿದೆ. ಅಲ್ಲಿ ಚಂಡ ಮಾರುತ ಎದ್ದಿರುವುದಾಗಿ ಪತ್ರವನ್ನೋದಿ ತಿಳಿದೆ. ಅವರ ವಿಶಾಲ ಹೃದಯದಲ್ಲಿ ಎದ್ದ ಸೇವಾಧರ್ಮದ ಬಿರುಗಾಳಿ ಇಲ್ಲಿಗೆ (ತಮ್ಮ ಎದೆಗೆ ಕೈಯಿಟ್ಟುಕೊಂಡರು) ಬಡಿಯಿತು. ನನ್ನ ಜೀವನದ ಹಾಗೂ ಕರ್ಮದ ಪಥ ಅಂದೇ ನಿಶ್ಚಯವಾಯಿತು.

''ಮೊದಲು ಖೇತ್ರಿಯಲ್ಲಿ ಕೆಲಸ ಆರಂಭಿಸಿದೆ, ಅನಂತರ ಇಲ್ಲಿ. ಸ್ವಾಮೀಜಿ ಯಾವಾಗ ಯಾವ ಭಾವವನ್ನು ಪ್ರತಿಪಾದಿಸುತ್ತಿದ್ದರೋ ಆಗ ಅದೊಂದೇ ಸತ್ಯವೆನ್ನಿಸುತ್ತಿತ್ತು. ಬೇಲೂರು ಮಠದಲ್ಲಿ ಹೆಚ್ಚಾಗಿ ಹಾಗೆ ಮಾತನಾಡುತ್ತಿದ್ದರು. ಆದ್ದರಿಂದ ಇದ್ದಕ್ಕಿದ್ದಂತೆ ಅಲ್ಲಿಗೆ ಬಂದವರಿಗೆ ಅವರ ಭಾವವನ್ನು ಗ್ರಹಿಸಲಾಗುತ್ತಿರಲಿಲ್ಲ. ಸೇವಾಧರ್ಮದ ವಿಚಾರ ಮಾತನಾಡುತ್ತಿದ್ದ ದಿನ, ಅದನ್ನು ಬಿಟ್ಟು ಉಳಿದವೆಲ್ಲವೂ ವ್ಯರ್ಥವೆನಿಸುತ್ತಿತ್ತು.

''ಆಗ ಸ್ವಾಮೀಜಿ ಸಾಕ್ಷಾತ್ ಶಂಕರ ಅಥವ ಬುದ್ಧ ಎಂದೆನ್ನಿಸುತ್ತಿತ್ತು. ಬೇಲೂರು ಮಠವಿಡೀ ಆಗ ಶಾಂತ ಹಾಗೂ ಸ್ಥಿರವಾಗಿರುತ್ತಿತ್ತು; ಧ್ಯಾನಮಗ್ನವಾದಂತೆ. ರಾಧೆಯ, ಗೋಪೀಭಾವದ ಅಥವಾ ಭಕ್ತಿಯ ವಿಷಯವಾಗಿ ಹೇಳುತ್ತಿದ್ದಂದು ಅವರು ಸಂಪೂರ್ಣ ಬೇರೆಯೇ ವ್ಯಕ್ತಿ ಆಗಿಬಿಡುತ್ತಿದ್ದರು. ಅವರು ಹೇಳುತ್ತಿದ್ದರು,

Radha was not of flesh and blood,
Radha was a froth in the ocean of love.

'' 'ರಾಧೆ ರಕ್ತ–ಮಾಂಸಗಳಿಂದ ಕೂಡಿದವಳಲ್ಲ, ಆಕೆ ಪ್ರೇಮ ಸಮುದ್ರದ ಒಂದು ಗುಳ್ಳೆಯಂತೆ.' ಅವರು ಹಾಗೆ ಹೇಳುವುದನ್ನು ನಾನು ಅನೇಕ ಬಾರಿ ಕೇಳಿದ್ದೇನೆ. ಅವರು ಬಹುಶಃ ಇದನ್ನು ಮನಸ್ಸಿ

ನಲ್ಲೇ ಹೇಳಿಕೊಳ್ಳುತ್ತ ಬಿರುಸಾಗಿ ನಡೆಯುತ್ತಿದ್ದರು. ಸಾಧಾರಣ ವಾಗಿ ಯಾರಾದರೂ ರಾಧಾ-ಕೃಷ್ಣ ಅಥವ ಗೋಪೀಭಾವದ ಬಗ್ಗೆ ಚರ್ಚಿಸಿದರೆ ಅವರನ್ನು ತಡೆದು, 'ಶಂಕರರ ವಿಚಾರ ಓದು, ಶಿವ ಭಾವವನ್ನು ತುಂಬಿಕೊ' ಎನ್ನುತ್ತಿದ್ದರು. ತ್ಯಾಗ, ಜ್ಞಾನ, ಧ್ಯಾನ, ಕರ್ಮ – ಇವುಗಳನ್ನು ಒತ್ತಿ ಹೇಳುತ್ತಿದ್ದರು.

''ಶಾಂತ ಹಾಗೂ ಸ್ಫೂರ್ತಿಯ ಭಾವದಿಂದ ಇವುಗಳನೆಲ್ಲ ಹೇಳುತ್ತ ಬಾಬಾ ಮಲಗಿದ್ದವರು ಎದ್ದು ಕುಳಿತು ಮುಂದುವರೆಸಿದರು: ''ಶಿವ! ಶಿವ! ಶಿವ! ಮೃತ್ಯುಂಜಯ, ಮದನಜಯಿ, ವೀರ, ಶ್ರೇಷ್ಠವೀರ. ಅವನಿಗೆ ಯಾರೂ ಸಾಟಿಯಿಲ್ಲ, ಎಲ್ಲರೂ ಆತನಿಗೆ ಶರಣಾಗತರು. ಆತನು ಲಯಕರ್ತನಲ್ಲವೆ? ಆತನೇ ಅಂತಿಮಗತಿ. ಮೊದಮೊದಲು ನನಗೆ ಶಿವನ ಚಿತ್ರವನ್ನು ನೋಡಲಾಗುತ್ತಿರಲಿಲ್ಲ ಅಸಹ್ಯವೆನಿಸುತಿತ್ತು! ಶಿವನ ಯಾವ ideaವೂ ನನಗಿರಲಿಲ್ಲ – ಡೊಳ್ಳು ಹೊಟ್ಟೆ, ಮಿತಿಮೀರಿ ಗಾಂಜಾ, ಭಂಗಿಗಳನ್ನು ಸೇವಿಸಿ ಮತ್ತೇರಿದ ಕಣ್ಣುಗಳಿಂದ ತೂರಾಡುತ್ತಿರುವ ಶಿವ! ಜನರಿಗೆ ತಕ್ಕಂತೆ ದೇವರು. ಹಿಂದಿನ ಕಾಲಕ್ಕಿಂತ ಈಗ art (ಚಿತ್ರಕಲೆ) ಬಹಳ improve ಆಗಿದೆ. ತುಂಬ ಸುಂದರವಾದ ಶಿವನ ಚಿತ್ರಗಳನ್ನು ನೋಡಿದ್ದೇನೆ. ಶಿವ ಒಂದು ದೃಷ್ಟಿಯಿಂದ ಶಕ್ತಿಮೂರ್ತಿ, ಅಂತೆಯೇ ಶಾಂತಮೂರ್ತಿ. ಏನು ಅದ್ಭುತ! ಎರಡು ರೀತಿಯ ಚಿತ್ರಗಳು ಈ ಕೋಣೆಯಲ್ಲಿವೆ. ಹಿಮಾಲಯವನ್ನು ನೋಡದಿದ್ದರೆ ಶಿವನನ್ನು ಸ್ವಲ್ಪವೂ ಅರ್ಥ ಮಾಡಿಕೊಳ್ಳಲಾಗದು. ಹಿಮಾಲಯ ಶಿವನ ಮೂರ್ತಿಯಿದ್ದಂತೆ. ಶಿವ ಶಿವ ಶಂಕರ, ಶಿವ ಶಿವ ಶಂಕರ! ಆಹಾ! ಶಿವನದು ಎಷ್ಟು ಮನೋಹರ ರೂಪ! ಠಾಕೂರರು ಚೈತನ್ಯಮಯ ಶಿವನನ್ನು ನನಗೆ ತೋರಿಸಿಕೊಟ್ಟರು. ದಕ್ಷಿಣೇಶ್ವರದ ಕಾಳೀಮಂದಿರಕ್ಕೆ ಕರೆದುಕೊಂಡು ಹೋಗಿ, 'ಅದೋ ನೋಡು, ಚೈತನ್ಯಮಯ ಶಿವ!' ಎಂದು ತೋರಿಸಿಕೊಟ್ಟಿದ್ದರು. ನಿಜವಾಗಿಯೂ ಅಂದು ನಾನು ಎಂಥ ದೃಶ್ಯವನ್ನು ಕಂಡೆ! ಠಾಕೂರರು ನನ್ನೊಳಗೆ ಎಂಥ ಆನಂದವನ್ನು ತುಂಬಿದರು! ಅನಂತರ ಸ್ವಾಮೀಜಿ ತೋರಿಸಿಕೊಟ್ಟರು, ಪ್ರತಿಯೊಂದು ಜೀವಿಯಲ್ಲಿಯೂ ಶಿವನಿದ್ದಾನೆ – ಜೀವಂತ ಶಿವ! ಅಸಹಾಯಕ, ದರಿದ್ರ, ರೋಗಿ, ಹಸಿದವರು, ಅನ್ನಹೀನ, ವಸ್ತ್ರ ಹೀನ – ಹೀಗೆ ಎಲ್ಲರಲ್ಲೂ ನಾರಾಯಣನೇ! ಸ್ವಾಮೀಜಿ ನೋಡುತ್ತಿದ್ದ ಕಣ್ಣುಗಳೇ ಬೇರೆ. ನಿಜವಾಗಿಯೂ ಹೇಳುತ್ತಿದ್ದೇನೆ, ಎಲ್ಲರಿಗೂ ತಿನ್ನಿಸಿದರೆ ಠಾಕೂರರೂ ತಿನ್ನುತ್ತಾರೆ. ಈ ವಿಶ್ವಾಸ ನನಗಿದೆ. ಇದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಠಾಕೂರರಿಗೋಸ್ಕರ ಏನನ್ನಾದರೂ ತಂದಿದ್ದಾರೆ ಎಂದಿಟ್ಟುಕೊ, ಅದನ್ನು ನೈವೇದ್ಯ ಮಾಡಬೇಕು. ಆದರೆ ಅದಕ್ಕೆ ಇನ್ನೂ ಸಮಯವಿದೆ – ಅಷ್ಟರಲ್ಲಿ ನಾನು ಅದನ್ನು ಎಲ್ಲರಿಗೂ ತಿನ್ನಿಸಿದ್ದಿದೆ. ಆ ಕುರಿತು ನನ್ನ ಮನಸ್ಸಿನಲ್ಲಿ ಒಂದಿಷ್ಟೂ ಅಳುಕು ಉಂಟಾಗಲಿಲ್ಲ. ನಮ್ಮ ಠಾಕೂರರು ಲಕ್ಷ ಬಾಯಿಗಳಿಂದ ತಿನ್ನುತ್ತಾರೆ, ಠಾಕೂರರಿಗೆ ಈ ರೀತಿ ತಿನ್ನಿಸುವುದರಲ್ಲೇ ನನಗೆ ಹೆಚ್ಚಿನ ಆನಂದ ವುಂಟಾಗುವುದು. ಮಂದಿರದಲ್ಲಿ ನೈವೇದ್ಯ ಮಾಡುವುದಕ್ಕಿಂತ ನನಗೆ ಈ ಭಾವವೇ ಇಷ್ಟ. ಮೊದಮೊದಲು ಮಂದಿರ ನಿರ್ಮಾಣವೇ ನನಗಿಷ್ಟವಿರಲಿಲ್ಲ, ಅದನ್ನೆಲ್ಲ ನೀವು ಕೇಳಿಯೇ ಇದ್ದೀರಿ. ಸಂನ್ಯಾಸಿಗಳಿಗೆ ಮಂದಿರವೇಕೆ? ಎಲ್ಲವೂ ಬ್ರಹ್ಮಮಯ. ಠಾಕೂರರ ಮಂದಿರದಲ್ಲಿ ನೈವೇದ್ಯ ಮಾಡದಿದ್ದರೆ ಅವರ ಊಟ ಆಗುವುದಿಲ್ಲವೆಂಬ ಭಾವನೆ ಏಕೆ? ಠಾಕೂರರು ಎಲ್ಲರ ಬಾಯಿಂದಲೂ ತಿನ್ನುತ್ತಾರೆ – **'ಬ್ರಹ್ಮಾರ್ಪಣಮ್.'**

''ಆಲಂಬಜಾರ್ ಮಠದಲ್ಲಿ ಬಹಳ ಸೆಕೆಯಿತ್ತು . ಯಾರಿಗೂ ನಿದ್ರೆ ಬರುತ್ತಿರಲಿಲ್ಲ, ಬೆವತು ಎಲ್ಲರ ಹೊದಿಕೆಯೂ ಒದ್ದೆಯಾಗಿತ್ತು. ನಾನು ಎದ್ದು ಬೀಸಣಿಗೆಯಿಂದ ಎಲ್ಲರಿಗೂ ಗಾಳಿ ಬೀಸತೊಡಗಿದೆ. ಆಗ ಬೆವರುವುದು ನಿಂತಿತು. ಎಲ್ಲರೂ ಶಾಂತಿಯಿಂದ ನಿದ್ರೆ ಮಾಡಿದರು. ಆಶ್ಚರ್ಯವೆಂದರೆ, ನನ್ನ ದೇಹವೂ ಅರ್ಧಗಂಟೆಯಲ್ಲಿ ತಣ್ಣಗಾಯಿತು. ಜನರಲ್ಲಿ ನಾನೊಬ್ಬ, ಜನರ ಸೇವೆಯೇ ಶ್ರೀರಾಮಕೃಷ್ಣರ ಸೇವೆ ಎಂದು ಆಗ ನನಗನ್ನಿಸಿತು. ನಾನು ಎಲ್ಲರಿಗೂ ಗಾಳಿ ಬೀಸಿದೆ. ಅವರೆಲ್ಲ ಸುಖವಾಗಿ ನಿದ್ರಿಸತೊಡಗಿದಾಗ ನನ್ನ ಆಯಾಸವೂ ಮಾಯವಾಯಿತು.''

ಬಾಬಾ 'ಸ್ಮೃತಿಕಥೆ' (ಅಖಂಡಾನಂದ ಸ್ಮೃತಿ ಸಂಚಯ) ಬರೆಸುತ್ತಿದ್ದಾರೆ. ಆಲಂಬಜಾರ್ ಮಠದಲ್ಲಿ ಭೂತಗಳ ವಿಷಯ ಬರೆಸಿದ ನಂತರ ಬಾಬಾ ಹೇಳುತ್ತಿದ್ದಾರೆ, ''ಭೂತಗಳು ಇವೆಯೆ? ನಾನು ನೋಡಿರಲಿಲ್ಲ; ಆದ್ದರಿಂದ ಅದನ್ನು ನಂಬುತ್ತಿರಲಿಲ್ಲ. 'ಭೂತಗಳಿಲ್ಲ' ಎಂದು ಠಾಕೂರರಿಗೆ ಹೇಳಿದೆ. ಅದಕ್ಕೆ ಅವರು, 'ಹಾಗೇಕೆ ಹೇಳುತ್ತಿ? ನಾನು ಭೂತ ನೋಡಿದ್ದೇನೆ, ನಾನು ಅವುಗಳಿದ್ದಲ್ಲಿಗೆ ಹೋಗುತ್ತಲೇ ಅವು ಕಷ್ಟದಿಂದ ಚಡಪಡಿಸಿದವು. ಅಲ್ಲಿಂದ ಬಂದುಬಿಟ್ಟೆ, ಆಗ ಅವು ಬದುಕಿಕೊಂಡವು' ಎಂದರು. ಇಲ್ಲಿಯೂ ಆಗಾಗ ಅವುಗಳನ್ನು ನೋಡುತ್ತೇನೆ, ಅದೂ ಇತ್ತೀಚಿಗೆ; ಒಂದು ರೀತಿಯ ಶರೀರವಿಲ್ಲದ ನೆರಳಿನಂತೆ, ಭೈರವನೋ ಏನೋ ಇರಬಹುದು.''

ಕತ್ತಲಾದ ಮೇಲೆ ಮಂಚದ ಮೇಲೆ ಮಲಗಿ 'ಸ್ಮೃತಿಕಥೆ'ಯನ್ನು ಬರೆಸುತ್ತ ಬಾಬಾ ಹೇಳುತ್ತಿದ್ದಾರೆ: ''ಬೇಲೂರು ಮಠದಲ್ಲಿ ಒಂದು ದಿನ ಶರತ್ ಮಹಾರಾಜರೊಂದಿಗೆ (ಸ್ವಾಮಿ ಶಾರದಾನಂದರು) ನಮ್ಮ ಜೀವನ ಠಾಕೂರರೊಂದಿಗೇ ಮುಗಿಯಿತೇನೋ ಎಂಬಂತೆ ಮಾತನಾಡುತ್ತಿದ್ದೆ. ನಂತರ ಗುರುಭಾಯಿಗಳು ಸೇರಿ ಕೆಲವೊಮ್ಮೆ ಬಾರಾನಗರದಲ್ಲಿ, ಪರ್ವತಗಳಲ್ಲಿ, ನಿರ್ಜನ ಪ್ರದೇಶ, ತೀರ್ಥಕ್ಷೇತ್ರಗಳಲ್ಲಿ ಸಾಧನೆ, ಭಜನೆ ಶುರುವಾಯಿತು. ನಂತರ ಸ್ವಾಮೀಜಿಯನ್ನು ಕೇಂದ್ರವಾಗಿಟ್ಟುಕೊಂಡು, ಮಠ-ಮಿಷನ್ ಎಲ್ಲ ಆರಂಭವಾಯಿತು. ಸ್ವಾಮೀಜಿ ಕಾಲವಾದಾಗ ಈ ಬಾರಿ ಎಲ್ಲವೂ ಮುಗಿದು ಹೋಯಿತು ಎಂದು ಮತ್ತೆ ಅನ್ನಿಸಿತ್ತು. ಶರತ್ ಮಹಾರಾಜರು, 'ನಿಜ, ನಮ್ಮ ಜೀವನ ಅವರೊಂದಿಗೇ ಹೊರಟುಹೋಯಿತು. ಇವೆಲ್ಲ ಬಾಹ್ಯದಲ್ಲಿ ಮಾತ್ರ, ಅಂತರಂಗವೆಲ್ಲ ಅವರೇ; ಠಾಕೂರು, ಸ್ವಾಮೀಜಿ ಇವರ ವಿಚಾರ; ಸಾಧನೆ-ಭಜನೆಯ ವಿಚಾರ ತುಂಬಿಕೊಂಡಿದೆ. ಇವನ್ನೆಲ್ಲ ಮೆಲಕುಹಾಕಿದಷ್ಟೂ ಒಳ್ಳೆಯದೆ; ಅದರಿಂದಲೇ ಆನಂದ.'

''ಆದ್ದರಿಂದಲೇ ಈ ಎಲ್ಲ ವಿಚಾರಗಳನ್ನು ಬರೆಸುವ ಹಂಬಲ ವುಂಟಾಗುತ್ತಿದೆ. ಅನವರತ ಅವರ ವಿಷಯಗಳೆಲ್ಲ ನೆನಪಿಗೆ ಬರುತ್ತದೆ. ಇದೊಂದೇ ನಿಜವಾದ ಆನಂದ ಅನ್ನಿಸುತ್ತದೆ. ಮಲಗಿ, ನಿದ್ರಿಸಿದರೂ ನಿಶ್ಚಿಂತನಾಗಿಲ್ಲದೆ, ಏನು ಬರೆಸುವುದೆಂದು ಆಲೋಚಿಸುತ್ತೇನೆ. ಯಾವುದರ ಬಳಿಕ ಇನ್ನೇನು ಬರಬೇಕು, ಎಲ್ಲವೂ ಏಕೆ ನೆನಪಾಗುತ್ತಿಲ್ಲ? ಅನೇಕ ವಿಷಯಗಳು ಒಮ್ಮೆಲೆ ಮನಸ್ಸಿನಲ್ಲೆದ್ದು ಗಲಿಬಿಲಿಯುಂಟಾಗುತ್ತದೆ. ಎಲ್ಲ ವಿಷಯಗಳನ್ನೂ ಪ್ರಕಾಶಪಡಿಸಲಾಗುವುದಿಲ್ಲ. ಹೇಳಲು ಸಾಧ್ಯವಾದರೂ ಬರೆಯಲಾಗುವುದಿಲ್ಲ.

''ಸ್ವಾಮೀಜಿ ಹೇಳುತ್ತಿದ್ದರು, 'ಹಿಂದಿನದನ್ನು ಜ್ಞಾಪಿಸಿಕೊಳ್ಳಲು ಪ್ರಯತ್ನಿಸುವಾಗ ಸಿನಿಮಾ ಸಾಗಿದಂತಿರುತ್ತದೆ. ಎಷ್ಟು ದೃಶ್ಯಗಳು, ಎಷ್ಟೊಂದು ಘಟನೆಗಳು! ನೋಡಿದ, ನೋಡದೆ ಉಳಿದ ಸಂಗತಿಗಳು ಏನೇನು! ಇನ್ನೆಂದೂ ನೋಡಲಾಗದಂಥ ಎಷ್ಟೊಂದು ದೃಶ್ಯಗಳಿವೆ!' ಅಂತ. ಶಶಿ ಮಹಾರಾಜರು (ಸ್ವಾಮಿ ರಾಮಕೃಷ್ಣಾನಂದರು) ಹೇಳಿದ್ದರು, 'ಅದು ಹೇಗಿರುತ್ತದೆ ಗೊತ್ತೆ? – ಪುಟಪುಟನೆ ಹೂ ಅರಳುವಂತೆ. ಪುಟ್, ಪುಟ್, ಪುಟ್ ಅಂತ. ಅದರ ಬಗ್ಗೆ ಇನ್ನೂ ಕೇಳುತ್ತೀಯಾ?...'

''ಆ ಕಡೆ (ಪಶ್ಚಿಮ ಭಾಗದಲ್ಲಿ) ಒಂದು ಬಂಡೆ ಇದೆ. ಅದರ ಮೇಲೆ ಮಲಗಿದರೆ ಹಿಂದಿನ ನೆನಪುಗಳೆಲ್ಲ ಎದ್ದು ಬರುತ್ತವೆ ಎಂದು ಹೇಳುತ್ತಾರೆ. ಆದರೆ ನನಗೆ ಅಂಥ ಅನುಭವವೇನೂ ಆಗಲಿಲ್ಲ. ಅದಕ್ಕಾಗಿ ಬಹಳ ಹೊತ್ತು ಮಲಗಿ ಪ್ರಯತ್ನಪಟ್ಟಿದ್ದೆ. ಅದನ್ನೆಲ್ಲ ತಿಳಿದುಕೊಂಡು ಆಗಬೇಕಾದದ್ದಾದರೂ ಏನು? ನೆನಪುಗಳೆಲ್ಲ ಆ ಮಾಯೆಯ ಜಠರದಲ್ಲಿ ಕೈಕಾಲು ಮುದುರಿಕೊಂಡು ಮಲಗಿರಬೇಕು. ಹಾಗೆ ತಾನೆ ಎಲ್ಲರೂ ಜನ್ಮ ತಳೆದಿರುವುದು? ನನಗಾದರೂ ಇನ್ನೊಮ್ಮೆ ಜನ್ಮವೆತ್ತುವ ಬಯಕೆಯಿಲ್ಲ. ಏನಯ್ಯಾ, ನಿಮಗೆ ಇನ್ನೊಮ್ಮೆ ಹುಟ್ಟಿಬರಲು ಆಸೆಯಿದೆಯೆ?'' ಎಂದರು. ಬಳಿಕ ಬಾಬಾ ಎದ್ದು ಕುಳಿತು, ಕೈಜೋಡಿಸಿ ಪ್ರಣಾಮ ಸಲ್ಲಿಸಿ, ಮನಸ್ಸಿನಲ್ಲೇ ಏನೋ ಪ್ರಾರ್ಥಿಸಿದರು.

ರಂಗೂನಿನಿಂದ ಹುಡುಗನೊಬ್ಬ ದೀಕ್ಷೆ ಪಡೆಯಲು ಬಂದಿದ್ದ. ಅವನು ಗಂಧ, ಪುಷ್ಪಗಳೊಂದಿಗೆ ತಯಾರಾಗಿ ಬಂದ. ಸುಮಾರು ಹೊತ್ತು ಠಾಕೂರರ ಮಂದಿರದಲ್ಲಿದ್ದು, ಒಮ್ಮೆ ಈ ಕಡೆ ನೋಡಿ ಹೋಗಲು ಬಂದ. ಮುಖಕ್ಷೌರಮಾಡಿಕೊಳ್ಳುತ್ತಿದ್ದ ಬಾಬಾ ಹೇಳಿದರು, ''ಈಗ ಸಮಯವಾಗಿಬಿಟ್ಟಿದೆ. ಇಂದು ಆತ್ಮಪೂಜೆ ಮಾಡಲಿ. ಈ ಹೂ, ಹಣ್ಣುಗಳನ್ನೆಲ್ಲ ಉಪಯೋಗಿಸಿ ನಿನ್ನನ್ನೇ ಪೂಜಿಸು – 'ಆತ್ಮನೇ ನಮಃ' ಅಂತ. ಮೊದಲು ಆತ್ಮವಿಶ್ವಾಸ, ಆತ್ಮಶ್ರದ್ಧೆ ಇರಬೇಕು.ಆಗತಾನೇ ಏನಾದರೂ ಸಿದ್ಧಿಸುವುದು? ಠಾಕೂರರು, 'ಜಾರ್ ಜೇ ಇಷ್ಟ, ತಾರ್ ಶೇ ಆತ್ಮಾ' (ಯಾರಿಗೆ ಯಾವುದು ಇಷ್ಟವೋ, ಅವರಿಗೆ ಅದೇ ಆತ್ಮ) ಎನ್ನುತ್ತಿದ್ದರು. ಅಂದರೆ, ಆತ್ಮಪೂಜೆಯಾದರೆ ಎಲ್ಲವೂ ಆದಂತೆ, ತಿಳಿಯಿತೆ? ಗಂಧ, ಪುಷ್ಪಗಳನ್ನರ್ಪಿಸಿ ನಿನ್ನ ಪೂಜೆಯನ್ನೇ ನೀನು ಮಾಡು. ಆಮೇಲೆ ಹಣ್ಣು, ಸಿಹಿತಿಂಡಿಗಳನ್ನು ಒಂದಾದ ಮೇಲೊಂದು ತಿನ್ನು. ಹ್ಹಾ, ಹ್ಹಾ! ನಿನಗೆ ಬೇಕಾದಂತೆಯೇ ಆಯಿತಲ್ಲ! ಇಂದು 'ಆತ್ಮಪೂಜೆ', ನಾಳೆ ಮಂತ್ರದೀಕ್ಷೆ ನಡೆಯಲಿ. ಈ ಬಾರಿಯಿಂದ ಹೀಗಾಗಲಿ – ದೀಕ್ಷೆಯ ಹಿಂದಿನ ದಿನ 'ಆತ್ಮಪೂಜೆ' ಮಾಡಬೇಕೆಂಬ ನಿಯಮವನ್ನು ಮಾಡಿದರಾಯಿತು. ಎಂಥ ತಮಾಷೆ! ನಮ್ಮದೆಲ್ಲ ಹೊಸ ಹೊಸ ರೀತಿಗಳು. ಹಳೆಯ ರೀತಿಗಳು ನಮಗೆ ಸ್ವಲ್ಪವೂ ಇಷ್ಟವಾಗದು.''

ಅವರ ನಗು ಚಿಕ್ಕ ಹುಡುಗನ ನಗುವಿನಂತೆ ಕೋಣೆಯೆಲ್ಲ ತುಂಬಿತು. ಅವರ ರಸಿಕತೆಯಲ್ಲಿ ಅವರೇ ಮುಳುಗಿದ್ದಾರೆ! ಅನಂತರ ಆ ಹುಡುಗ ಏನು ಮಾಡಿದನೆಂದು ತಿಳಿದುಕೊಳ್ಳಲು ಹೇಳಿದರು. ಬಳಿಕ ಹೇಳಿದರು, ''ನೋಡು, ಅವನು ನಿಜವಾಗಿಯೂ ನಾನು ಹೇಳಿದಂತೆಯೇ ಮಾಡಿದನೆ? ಎಲ್ಲವನ್ನೂ ಒಂದಾದ ಮೇಲೊಂದರಂತೆ ಮಾಡಿ ಮುಗಿಸಿದನೆ? ಹುಡುಗ ತುಂಬ ಸರಳನಲ್ಲವೆ?''

ರಂಗೂನಿನ ಭಕ್ತನಿಗೆ ಬಾಬಾ ಹೇಳುತ್ತಿದ್ದಾರೆ: ''ನೀನು ನ್ಯಾಪಿ (ಬರ್ಮಾದ ಒಂದು ಬಗೆಯ ತಿನಿಸು) ತಿನ್ನುತ್ತೀಯಾ? ತಿನ್ನು, ಚೆನ್ನಾಗಿ ತಿನ್ನು. 'ಮ್ಯಾಂಗೋಸ್ಟಿನ್' (ಚಿಕ್ಕ ಸೇಬಿನಂತಹ ಹಣ್ಣು) ಎಲ್ಲಿಂದ ತಂದಿದ್ದೀಯಾ? ನೀನು ಅದನ್ನೇಕೆ ತಿನ್ನುತ್ತಿಯೋ, ನನಗೆ ತಿಳಿಯದು. ಸಿಹಿತಿಂಡಿ ತರಲಾಗಲಿಲ್ಲವೆ? ನಿನಗೇನೂ ತಿಳಿಯದು. ಠಾಕೂರರ ಜಾಗಕ್ಕೆ ಬರುವಾಗ ಸಿಹಿತಿಂಡಿಯನ್ನು ಕೈಯಲ್ಲಿ ಹಿಡಿದುಕೊಂಡು ಬರಬೇಕು. ನಾನು ಸಿಹಿತಿಂಡಿ ತಿನ್ನುವುದಿಲ್ಲ; ಠಾಕೂರರಿಗೋಸ್ಕರವೇ ಹೇಳುತ್ತಿದ್ದೇನೆ. ಈಗ ಇಲ್ಲಿರು; ಇಲ್ಲಿಂದ ಬೇಲೂರು ಮಠಕ್ಕೆ ಹೋಗು – ಹೋಗುವಾಗ ಯಾವುದಾದರೂ ಒಳ್ಳೆಯ ಸಿಹಿತಿಂಡಿಯೊಂದಿಗೆ ಠಾಕೂರರ ದರ್ಶನ ಮಾಡು, ತಿಳಿಯಿತೆ?''

ಅದೇ ಭಕ್ತ ಒಂದುದಿನ ರಾತ್ರಿಯೆಲ್ಲ ಬಾಬಾಗೆ ಗಾಳಿ ಬೀಸುತ್ತಿದ್ದ. ಇತರರ ಸರದಿ ಬಂದಾಗಲೂ ಅವನು ಅವರಿಗೆ ಬಿಟ್ಟುಕೊಡಲಿಲ್ಲ. ಮುಂಜಾನೆ ಬಾಬಾಗೆ ಚಳಿಯಾಗುತ್ತಿದ್ದರೂ ಬಿಡಲಿಲ್ಲ. ಬೆಳಿಗ್ಗೆ ಬಾಬಾ ಹೇಳಿದರು, ''ಅವನದು ನವಾನುರಾಗ. ರಾತ್ರಿಯೆಲ್ಲ ಗಾಳಿ ಬೀಸುತ್ತಾನೆ, ಬೇಡವೆಂದರೂ ನಿಲ್ಲಿಸುತ್ತಿಲ್ಲ. ಎರಡು ದಿನ ಮಾಡಲಿ. ಆಮೇಲೆ ಹೇಗೂ ನೀವೆಲ್ಲ ಇದ್ದೀರಲ್ಲಾ?'' ✷

*(ಮುಂದುವರಿಯುವುದು)*

**ಹಿಂದೂ ನಾರಿಯರು ಧಾರ್ಮಿಕ ಮತ್ತು ಆಧ್ಯಾತ್ಮಿಕ ಪ್ರವೃತ್ತಿಯವರು. ಬಹುಶಃ ಪ್ರಪಂಚದ ಇತರ ನಾರಿಯರಿಗಿಂತ ಹೆಚ್ಚು ಎಂದು ಬೇಕಾದರೆ ಹೇಳಬಹುದು. ನಾವು ಈ ಪವಿತ್ರ ಭಾವನೆಯನ್ನು ರಕ್ಷಿಸಿಕೊಂಡು ನಮ್ಮ ಸ್ತ್ರೀಯರ ಬುದ್ಧಿಯ ಬೆಳವಣಿಗೆಗೆ ಅವಕಾಶ ಕೊಟ್ಟರೆ, ಭಾರತದ ಭವಿಷ್ಯ ನಾರಿಯು ಇಡೀ ವಿಶ್ವಕ್ಕೇ ಆದರ್ಶ ವಾಗುವಳು.**

**–ಸ್ವಾಮಿ ವಿವೇಕಾನಂದ**



# ಕೈಲಾಸ ಮಾನಸ ಸರೋವರ ಯಾತ್ರೆ

ಸ್ವಾಮಿ ದಾಮೋದರಾನಂದ

ಅನುವಾದ: ಡಾ. ಕೆ.ಎಲ್.ಪ್ರಸನ್ನಾಕ್ಷೀ

ಭಾಗ ೧

**ಹೆಚ್ಚು ವಾಹನ ಸೌಕರ್ಯಗಳಿಲ್ಲದಿದ್ದ ಕಾಲಘಟ್ಟದಲ್ಲಿ, ಅತ್ಯಂತ ಕಷ್ಟಕರವೂ ರೋಚಕವೂ ಸ್ಫೂರ್ತಿಯುತವೂ ಆದ ಯಾತ್ರೆಯನ್ನು ಮಾಡಿದ ಅನುಭವಗಳ ಒಂದು ವಿವರಣೆ ಇಲ್ಲಿದೆ. ಲೇಖಕರು ರಾಮಕೃಷ್ಣ ಮಹಾಸಂಘದ ಹಿರಿಯ ಹಿರಿಯ ಸಂನ್ಯಾಸಿಗಳು ; ಅವರು ಸಂಘದ ಬೃಂದಾವನ, ಮೈಸೂರು, ರಂಗೂನ್, ಸಿಂಗಾಪುರ, ಮಲೇಷ್ಯಾ , ಫಿಜಿ, ಆಸ್ಟ್ರೇಲಿಯಾ ಹಲಸೂರು ಮೊದಲಾದ ಶಾಖಾಕೇಂದ್ರ ಗಳಲ್ಲಿ ಸೇವೆ ಸಲ್ಲಿಸಿ, ಇತ್ತೀಚೆಗೆ ದೈವಾಧೀನರಾದರು. 'Prabuddha Bharata' ದ ೨೦೧೪ರ ಏಪ್ರಿಲ್-ಮೇ ಸಂಚಿಕೆಗಳಲ್ಲಿ ಪ್ರಕಟ ವಾದ ಈ ಲೇಖನದ ಅನುವಾದಕರು ಸಂಸ್ಕೃತ ವಿದ್ವಾಂಸರು ಹಾಗೂ ನಿವೃತ್ತ ಕಾಲೇಜು ಪ್ರಾಂಶುಪಾಲರು.**

೬೦ ವರ್ಷಗಳ ಹಿಂದೆ ನಾನು ಕೈಲಾಸ ಪರ್ವತಕ್ಕೆ ಪಾದಯಾತ್ರೆ ಮಾಡಿದ ಕಥೆಯಿದು.

ಪ್ರತಿಯೊಂದು ಮತದಲ್ಲೂ ಆಯಾ ಮತ ಪ್ರವರ್ತಕ ಪ್ರವಾದಿಗಳೂ, ಸಾಧುಗಳೂ, ಸಂನ್ಯಾಸಿಗಳೂ ಮತ್ತು ವಿಶೇಷ ಪೂಜಾದಿನಗಳೂ ಇರುತ್ತವೆ. ಯಾವುದೇ ಮತದ ಭಕ್ತರಿರಲಿ, ತಾವು ಪವಿತ್ರವಾಗಲು ಮತ್ತು ತಮ್ಮ ಪಾಪಗಳನ್ನು ತೊಳೆದುಕೊಳ್ಳಲು ತೀರ್ಥಯಾತ್ರೆ ಮಾಡುತ್ತಾರೆ. ಪ್ರಾರ್ಥನೆ, ಪೂಜೆ, ಧ್ಯಾನಾದಿಗಳೂ ಈ ಯಾತ್ರೆಯ ಅಂಗಗಳಾಗಿರುತ್ತವೆ. ಭಾರತದಲ್ಲಿ, ದಕ್ಷಿಣದ ಕನ್ಯಾಕುಮಾರಿಯಿಂದ ಪೂರ್ವದ ಕಾಮಾಖ್ಯದವರೆಗೆ, ಉತ್ತರದ ಬದರೀ ಕೇದಾರನಾಥಗಳಿಂದ ಪಶ್ಚಿಮದ ದ್ವಾರಕಾನಾಥ ಸೋಮನಾಥದವರೆಗೆ ತೀರ್ಥಕ್ಷೇತ್ರಗಳು ತುಂಬಿ ಹೋಗಿವೆ. ಈ ಎಲ್ಲಾ ತೀರ್ಥಕ್ಷೇತ್ರಗಳ ಕೇಂದ್ರಭಾಗದಲ್ಲಿ ವಾರಣಾಸಿಯ ವಿಶ್ವನಾಥ ಕ್ಷೇತ್ರವಿದೆ. ಬಹು ಪ್ರಾಚೀನಕಾಲದಿಂದಲೂ ಲಕ್ಷಾಂತರ ಸಂಖ್ಯೆಯ ಭಕ್ತರು, ಈ ಅವಕಾಶವನ್ನು ಸದುಪಯೋಗ ಮಾಡಿಕೊಂಡು, ವಿವಿಧ ನಾಮರೂಪಗಳಲ್ಲಿ ಆವಿರ್ಭವಿಸಿರುವ ದೇವದೇವತೆಗಳಿಗೆ ಸಂಬಂಧಿಸಿದ, ಪವಿತ್ರ ಕ್ಷೇತ್ರಗಳ ಯಾತ್ರೆ ಮಾಡಿ, ಭಕ್ತಿಯಿಂದ ಭಗವಂತನನ್ನು ಆರಾಧಿಸಿದ್ದಾರೆ. ತೀರ್ಥಯಾತ್ರೆ ಮತ್ತು ಪ್ರಾರ್ಥನೆಗಳು ವ್ಯಕ್ತಿಯನ್ನು ಆಧ್ಯಾತ್ಮಿಕ ಒಳ ಅರಿವು, ಅನುಭವಗಳಿಂದ ಉದಾತ್ತನನ್ನಾಗಿ ಮಾಡುತ್ತವೆ. ಒಂದು ದೃಷ್ಟಿಯಲ್ಲಿ, ತೀರ್ಥಯಾತ್ರೆ ಮಾನವ ಜೀವನದಲ್ಲಿ ಭಗವಂತನನ್ನು ಸೇರುವ ಒಂದು ಕಠಿಣತಮ ಮಾರ್ಗ ಎನಿಸುತ್ತದೆ.

೧೯೪೭ರಲ್ಲಿ ಭಾರತ ವಿಭಜನೆಯಾದ ಮೇಲೆ, ಈಗ ಪಾಕಿಸ್ತಾನದಲ್ಲಿರುವ ಲಾಹೋರಿನ ನಮ್ಮ ಕೇಂದ್ರದಿಂದ ಇತರ ನಿರಾಶ್ರಿತರೊಡನೆ ನಾನೂ ಭಾರತಕ್ಕೆ ನಿರಾಶ್ರಿತನಾಗಿ ಬಂದೆ. ಬೃಂದಾವನದ ರಾಮಕೃಷ್ಣ ಮಿಷನ್ ಸೇವಾಕೇಂದ್ರಕ್ಕೆ ನನ್ನನ್ನು ಕಳುಹಿಸಿದರು. ಅಲ್ಲಿ ನನಗೆ ಚಿಕಿತ್ಸಾಲಯದ ವಿವಿಧ ವಿಭಾಗಗಳಲ್ಲಿ ಸೇವೆ ಸಲ್ಲಿಸುವ ತರಬೇತಿ ನೀಡಲಾಯಿತು. ಕೊನೆಗೆ ನಾನೊಬ್ಬ ರೇಡಿಯಾಲಜಿಸ್ಟ್ (ವಿಕಿರಣ ತಜ್ಞ) ಆದೆ.

## ಬದರೀನಾಥ

೧೯೫೨ರಲ್ಲಿ ಬದರೀನಾಥ-ಕೇದಾರನಾಥಗಳ ಯಾತ್ರೆ ಮಾಡಬೇಕೆಂಬ ತೀವ್ರ ಆಕಾಂಕ್ಷೆ ನನ್ನಲ್ಲಿ ಮೂಡಿತು. ಆಗ ಕಾರ್ಯದರ್ಶಿಗಳಾಗಿದ್ದ ಸ್ವಾಮಿ ಮಾಧವಾನಂದರಲ್ಲಿ ನನ್ನ ಪ್ರಾರ್ಥನೆಯನ್ನು ಮಂಡಿಸಿದೆ. ನಮ್ಮ ಸೇವಾಶ್ರಮದ ಮುಖ್ಯಸ್ಥರಾದ ಸ್ವಾಮಿ ಕೃಪಾನಂದರ ಮುಖಾಂತರ ಕೆಲವು ಪತ್ರ ವ್ಯವಹಾರಗಳಾದ ನಂತರ ಪೂಜ್ಯ ಸ್ವಾಮೀಜಿ ನನಗೆ ಯಾತ್ರೆ ಮಾಡಲು ಅನುಮತಿ ನೀಡಿದರು. ನಾನು ಬೆಚ್ಚನೆಯ ಬಟ್ಟೆಬರೆ, ದೃಢವಾದ ಒಂದು ದಂಡ, ಕಮಂಡಲು ಮೊದಲಾದವುಗಳನ್ನು ಯಾತ್ರೆಗಾಗಿ ಸಿದ್ಧಮಾಡಿಕೊಂಡೆ.

ಜುಲೈ ತಿಂಗಳಿನಲ್ಲಿ ಬೃಂದಾವನದಿಂದ ಹೊರಟು ದೆಹಲಿಯ ಮುಖಾಂತರ ಹರಿದ್ವಾರ ಋಷೀಕೇಶಗಳನ್ನು ತಲುಪಿದೆ.

ಋಷೀಕೇಶದಲ್ಲಿ ಪೂಜ್ಯ ಜಗಬಂಧು ಮಹಾರಾಜ್ (ಸ್ವಾಮಿ ನಿತ್ಯಾತ್ಮಾನಂದ) ಒಂದು ಕುಟೀರದಲ್ಲಿ ತಪಸ್ಸು ಮಾಡುತ್ತಿದ್ದರು. ಅವರೊಡನೆ ೩-೪ ದಿನ ಉಳಿಯುವ ಭಾಗ್ಯ ನನ್ನದಾಯಿತು. ಶ್ರೀರಾಮಕೃಷ್ಣರ ಕೃಪೆಯಿಂದ ನನ್ನ ಯಾತ್ರೆ ಸುಖಕರವೂ, ಸುಗಮವೂ, ಫಲಪ್ರದವೂ ಆಗಲೆಂದು ಹರಸಬೇಕೆಂದು ಸ್ವಾಮಿಯವರಲ್ಲಿ ಪ್ರಾರ್ಥಿಸಿಕೊಂಡೆ. ಅವರು, ಶ್ರೀರಾಮಕೃಷ್ಣರು, ಶ್ರೀಮಾತೆ ಶಾರದಾದೇವಿಯವರು ನಮ್ಮ ಎಡಬಲಗಳಲ್ಲಿದ್ದು ಸದಾ ನಮ್ಮನ್ನು ರಕ್ಷಿಸುತ್ತಿರುವರು ಎಂಬ ಅಂಶವನ್ನು ನನಗೆ ನೆನಪಿಸಿಕೊಟ್ಟರು. ಈ ಭಾವನೆ ಠಾಕೂರ್ ಮತ್ತು ಶ್ರೀಮಾತೆ ಬಗ್ಗೆ ನನಗಿದ್ದ ಪ್ರೀತಿ, ಭಕ್ತಿ ಭಾವಗಳನ್ನು ಬಲಗೊಳಿಸಿದವು. ಈ ವಿಚಾರಗಳು ನನ್ನ ಆಧ್ಯಾತ್ಮಿಕ ಚಿಂತನೆಗಳನ್ನು ಬಲಗೊಳಿಸಿದುದಲ್ಲದೆ, ನನ್ನ ಯಾತ್ರಾಕಾಲದಲ್ಲಿ ಬಂದೆರಗಿದ, ಕಲ್ಪಿಸಲೂ ಆಗದ, ಮಾರಣಾಂತಿಕ ವಿಪತ್ತುಗಳಿಂದಲೂ, ಸಮಸ್ಯೆಗಳಿಂದಲೂ ನನ್ನನ್ನು ಪಾರುಮಾಡಿ, ನನ್ನ ಆಧ್ಯಾತ್ಮ ಭೂಮಿ ಭಾರತಕ್ಕೆ ನಾನು ಕ್ಷೇಮವಾಗಿ ಹಿಂತಿರುಗಿ ಬಂದು ಸೇರಲು ಸಹಾಯ ಮಾಡಿದವು.

ಮರುದಿನ ನಾನು ಋಷೀಕೇಶದ ಲಕ್ಷ್ಮಣಝೂಲಾವನ್ನು ದಾಟಿ, ಸುರುಳಿ ಸುರುಳಿಯಾದ ಪರ್ವತದ ವಕ್ರಮಾರ್ಗದಲ್ಲಿ ಸಾಗತೊಡಗಿದೆ. ಸ್ವಾಮಿ ಬ್ರಹ್ಮಾನಂದರ ಶಿಷ್ಯರಾದ ಸ್ವಾಮಿ ಪುರುಷೋತ್ತಮಾನಂದರು ತಪಸ್ಸು ಮಾಡುತ್ತಿದ್ದ ಗುಹೆಯನ್ನು ತಲುಪಿದೆ. ಒಂದು ದಿನ ಅವರೊಡನೆ ಉಳಿದು, ಅವರ ಆಶೀರ್ವಾದ ಪಡೆದು ನನ್ನ ಯಾತ್ರೆ ಮುಂದುವರೆಸಿದೆ. ಈ ಹಾದಿಯಲ್ಲಿ ಪ್ರತಿ ೧೦, ೧೫ ಕಿಲೋಮಿಟರ್‌ಗಳಿಗೆ ಒಂದೊಂದು ವಿಶ್ರಾಂತಿ ಗೃಹಗಳು ಇವೆ. ಅಲ್ಲಿ ಅಡಿಗೆ ಮಾಡಿ, ಊಟ ಮಾಡಿ, ವಿಶ್ರಾಂತಿ ಪಡೆಯಲು ಬೇಕಾದ ಎಲ್ಲಾ ಸಾಮಗ್ರಿಗಳೂ ಇರುತ್ತವೆ.

ಸಿಖ್ಖರ ೧೦ನೆಯ ಗುರುವಾದ ಗೋವಿಂದಸಿಂಗ್ ಅವರು ಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡಿದ ಹೇಮಕುಂಡ, ಲೋಕಪಾಲ ಎಂಬ ಸ್ಥಳ ಸೇರಲು, ಸ್ನೇಹಿತರ ಸಲಹೆಯಂತೆ ಗೋವಿಂದಘಟ್ಟದ ಬಳಿ ಕವಲುಮಾರ್ಗದಲ್ಲಿ ಸಾಗಿದೆ. ಹಿಮಗಡ್ಡೆಗಳಿಂದ ಘನವಾದ ನೀರಿರುವ ಆ ಸರೋವರದ ಬಳಿ ಒಂದು ಗುರುದ್ವಾರವಿದೆ. ಅಲ್ಲಿ ಯಾರೂ ವಾಸಿಸುತ್ತಿರಲಿಲ್ಲ. ಹಿಮಬೆಟ್ಟ ಸಿಡಿದು ಹಿಮಗಡ್ಡೆಗಳಾಗಿ ಒಡೆದು, ಆ ವಿಶಾಲ ಸರೋವರದಲ್ಲಿ ಬೀಳುವ ಶಬ್ದ ಚೆನ್ನಾಗಿ, ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅಲ್ಲಿ ಹಿಮದ ನೀರು ಒಂದು ತೊರೆಯಾಗಿ ಹರಿಯುತ್ತಿತ್ತು.

ಅಲ್ಲಿಂದ ಹಿಂತಿರುಗುತ್ತಿರುವಾಗ ಕಂದು ಹೂಗಳಿಂದ ತುಂಬಿರುವ, 'ಹೂವುಗಳ ಕಣಿವೆ' ಎಂದೇ ಹೆಸರಾಗಿರುವ ವಿಸ್ತಾರವಾದ ಜಾಗವನ್ನು ದಾಟಿ ಮುಂದೆ ಸಾಗಬೇಕಾಗಿತ್ತು. ತೂಗಾಡುತ್ತಿರುವ ವಿವಿಧ ಹೂವುಗಳಿಂದ, ಔಷಧೀಯ ಗಿಡಮೂಲಿಕೆಗಳಿಂದ ತುಂಬಿದ, ರುದ್ರ ರಮಣೀಯವಾದ ಆ ಮನೋಹರ ದೃಶ್ಯ ಇಂದಿಗೂ, ಇಷ್ಟು ದೀರ್ಘಕಾಲ ಕಳೆದಿದ್ದರೂ, ನನ್ನ ಮನದಲ್ಲಿ ಅಚ್ಚಳಿಯದೆ ಉಳಿದಿದೆ.

ಈಗ ನಾನು ಬದರೀನಾಥಕ್ಕೆ ಹೋಗುವ ಮುಖ್ಯರಸ್ತೆಗೆ ಹಿಂತಿರುಗಿ ಬಂದೆ. ಶ್ರೀಶಂಕರಾಚಾರ್ಯರು ಸ್ಥಾಪಿಸಿದ ನಾಲ್ಕು ಮಠಗಳಲ್ಲಿ ಒಂದಾದ ಜ್ಯೋತಿರ್ಮಠ ಅಥವಾ ಜೋಷೀಮಠವನ್ನು ಸೇರಿದೆ. ಉತ್ತರ ಭಾರತದ ವಿವಿಧ ಭಾಗಗಳಲ್ಲಿ ವೇದಾಂತ ಪ್ರಚಾರ ಮಾಡಲು ಈ ಮಠವನ್ನು ಅವರು ಸ್ಥಾಪಿಸಿದರು. ಪೂರ್ವದ ಪುರೀ ಕ್ಷೇತ್ರದಲ್ಲೂ, ಪಶ್ಚಿಮದ ದ್ವಾರಕೆಯಲ್ಲೂ, ದಕ್ಷಿಣದ ಶೃಂಗೇರಿಯಲ್ಲೂ ಶ್ರೀಶಂಕರರು ಸ್ಥಾಪಿಸಿದ ಉಳಿದ ಮೂರು ಮಠಗಳಿವೆ.

ಜೋಷೀಮಠದಿಂದ ಹೊರಟು ಮೇಲೇರುತ್ತಾ ಒಂದೆರಡು ದಿನಗಳಲ್ಲಿ ಬದರೀನಾಥವನ್ನು ತಲುಪಿದೆ. ಗಂಗೆಯ ಉಪನದಿಯಾದ ಅಲಕನಂದಾ ನದಿಯ ದಡದಲ್ಲಿ ಬದರೀನಾಥ ಕ್ಷೇತ್ರವಿದೆ. ಬದರೀನಾರಾಯಣನ ವಿಗ್ರಹವನ್ನು ಬೌದ್ಧರು ಈ ನದಿಗೆ ಎಸೆದು, ಆ ಸ್ಥಳದಲ್ಲಿ ಬುದ್ಧನ ವಿಗ್ರಹವನ್ನು ಸ್ಥಾಪಿಸಿದರೆಂದು ಐತಿಹ್ಯವಿದೆ. ಹುಟ್ಟಿನಿಂದಲೇ ಪವಿತ್ರವಾದ ಅಲಕನಂದೆಯನ್ನು ಮತ್ತೂ ಪಾವನಗೊಳಿಸಲೋ ಎಂಬಂತೆ ಬದರಿನಾರಾಯಣನು ಅಲ್ಲಿ ಮುಳುಗಿರುವುದು, ಆಚಾರ್ಯ ಶಂಕರರು ಇಲ್ಲಿಗೆ ಬಂದಿದ್ದಾಗ ಅವರ ಅಂತರಂಗದಲ್ಲಿ ಗೋಚರಿಸಿತು. ತಕ್ಷಣ ಆಚಾರ್ಯರು ಆ ವಿಗ್ರಹವನ್ನು ಮೇಲೆತ್ತಿ ದಕ್ಷಿಣದ ಮಲಬಾರ್ (ಕೇರಳದ ಉತ್ತರಭಾಗ) ಪ್ರದೇಶದಿಂದ ಕರೆತಂದ ವೈದಿಕ ವಿದ್ವಾಂಸರಿಂದ ಮರುಪ್ರತಿಷ್ಠಾಪನೆ ಮಾಡಿಸಿದರು. ಈ ಪರಂಪರೆ ಮುಂದುವರೆದು, ಈಗಲೂ ಮಲಬಾರಿನ ಬ್ರಾಹ್ಮಣ ಪುರೋಹಿತರೇ ಈ ದೇವಾಲಯದಲ್ಲಿ ಪೂಜಾಕಾರ್ಯವನ್ನು ನೆರವೇರಿಸುತ್ತಿದ್ದಾರೆ.

ನೆಲದಿಂದ ಉಕ್ಕಿ ಬರುವ ಬಿಸಿನೀರಿನ ಬುಗ್ಗೆಯಾದ 'ತಪ್ತಕುಂಡ'ದ ನೀರಿನಲ್ಲಿ ಪ್ರತಿದಿನ ಸ್ನಾನಮಾಡುತ್ತಿದ್ದೆ. ದೇವಾಲಯದ ಪ್ರಾರ್ಥನಾ ಮಂದಿರದ ಎರಡೂ ಬದಿಗಳಲ್ಲಿ ಕಟ್ಟಿರುವ ಶಿಲಾಸನಗಳ ಮೇಲೆ ಹೋಗಿ ಕುಳಿತುಕೊಳ್ಳುತ್ತಿದ್ದೆ. ವಿಷ್ಣುಸಹಸ್ರನಾಮ ಪಾರಾಯಣ ಮಾಡುತ್ತಿದ್ದ ವಿದ್ವಾಂಸರ ಎದುರು ಸಾಲಿನಲ್ಲಿ ಕುಳಿತು ನಾನೂ ಅವರೊಡನೆ ಪಾರಾಯಣದಲ್ಲಿ ಭಾಗವಹಿಸುತ್ತಿದ್ದೆ. ನಾರಾಯಣನ ವಿಗ್ರಹಕ್ಕೆ ಅಭಿಷೇಕ ಪೂರ್ಣವಾಗುವಲ್ಲಿಯವರೆಗೆ ಪಾರಾಯಣ ಸಾಗುತ್ತಿತ್ತು. ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆಯಿಂದ ಕೂಡಿದ ಪಂಚಾಮೃತ ಅಭಿಷೇಕ ಮಾಡಿ, ಕೊನೆಯಲ್ಲಿ ಶುದ್ಧ ನೀರಿನ ಅಭಿಷೇಕದಿಂದ ಪೂರ್ಣ ವಿಗ್ರಹವನ್ನು ಶುದ್ಧಗೊಳಿಸಲಾಗುತ್ತಿತ್ತು. ಅನಂತರ ಶ್ರೀಗಂಧ, ಅರಿಷಿಣ ಕುಂಕುಮ, ಧೂಪ, ದೀಪ, ವಸ್ತ್ರ, ಆಭರಣ, ಅಲಂಕಾರಾದಿ ಸೇವೆಗಳನ್ನು ಮಾಡಲಾಗುತ್ತಿತ್ತು. ಇಷ್ಟೆಲ್ಲಾ ಆಗುವಲ್ಲಿತನಕ ಹಾಕಿದ್ದ ಪರದೆಯನ್ನು ಸರಿಸಿ ಭಕ್ತರಿಗೆ ದರ್ಶನ ಮಾಡಲು ಅವಕಾಶ ಕಲ್ಪಿಸಲಾಗುತ್ತಿತ್ತು.

ಹಿಮಾಲಯದ ಸುಮಾರು ಎಲ್ಲಾ ಪವಿತ್ರಕ್ಷೇತ್ರಗಳಲ್ಲೂ ವಿವಿಧ ಧರ್ಮಸಂಸ್ಥೆಗಳು ಸಾಧುಗಳಿಗೆ ಉಚಿತವಾಗಿ ಆಹಾರವನ್ನು ನೀಡುತ್ತಿದ್ದವು. ಇವುಗಳಲ್ಲಿ ಕಾಲೀಕಂಬಲೀವಾಲಾ ಛತ್ರ ಅತ್ಯಂತ ಪ್ರಸಿದ್ಧವಾದುದು. ಇತರ ಸಾಧುಗಳೊಡನೆ ಸರತಿ ಸಾಲಿನಲ್ಲಿ ನಿಂತು ನಾನೂ ಅಲ್ಲಿ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದೆ. ಅಲ್ಲಿಂದಲೇ ಸಂಜೆ ಭಿಕ್ಷೆಯನ್ನು ಸ್ವೀಕರಿಸಿ, ನಮ್ಮ ನಮ್ಮ ಕುಟೀರಕ್ಕೆ ಹೋಗಿ ಅಗತ್ಯವೆನಿಸಿದಾಗ ಆಹಾರ ಸ್ವೀಕರಿಸುತ್ತಿದ್ದೆವು.

## ಕೇದಾರನಾಥ

ಅಲ್ಲಿಂದ, ಭಯಂಕರವಾದ ಭೂ ಪ್ರದೇಶಗಳಿಂದ ಕೂಡಿದ ಪರ್ವತಭಾಗದಲ್ಲಿ ನನ್ನ ಪ್ರಯಾಣ ಮುಂದುವರೆಸಿದೆ. ಗಂಗೆಯ ಮತ್ತೊಂದು ಉಪನದಿಯಾದ ಮಂದಾಕಿನೀ ತೀರದಲ್ಲಿರುವ ಶಿವನ ದೇವಾಲಯವಾದ ಕೇದಾರನಾಥವನ್ನು ಸೇರಿದೆ. ಅದು ಬದರೀನಾಥಕ್ಕಿಂತ ಹೆಚ್ಚು ಎತ್ತರದಲ್ಲಿದೆ ಮತ್ತು ಹೆಚ್ಚು ಶೀತಲವಾಗಿದೆ. ದೇವಾಲಯದ ಸ್ವಲ್ಪ ಹಿಂಭಾಗದಲ್ಲೇ ಎತ್ತರ ಎತ್ತರವಾದ ಹಿಮಾಚ್ಛಾದಿತ ಪರ್ವತ ಶಿಖರಗಳಿವೆ. ಒಂದು ಸಂಜೆ ಈ ಹಿಮಶಿಖರಗಳೆಡೆಗೆ ಹೋಗುತ್ತಿದ್ದಾಗ ಧ್ಯಾನಮಗ್ನನಾಗಿದ್ದ ಒಬ್ಬ ಸಾಧುವನ್ನು ಕಂಡೆ. ಅಲ್ಲಿ ಧ್ಯಾನಿಸುವುದು ಅತ್ಯಂತ ಅಪಾಯಕಾರಿಯಾದುದು. ಏಕೆಂದರೆ, ಅತ್ಯಂತ ಆರೋಗ್ಯವಂತ ದೃಢಕಾಯವಿಲ್ಲದಿದ್ದರೆ ಯಾರಾದರೂ ಮಹಾಸಮಾಧಿಯನ್ನೇ ಹೊಂದಿಬಿಡಬಹುದು, ಅಷ್ಟು ಶೀತಲವಾದ ಕುಳಿರ್ಗಾಳಿ ಬೀಸುತ್ತಿತ್ತು. ಆದುದರಿಂದ ಇಂತಹ ಸಂದರ್ಭಗಳಲ್ಲಿ ತಮ್ಮ ತಮ್ಮ ಕೋಣೆಗಳಲ್ಲಿ ಅಥವಾ ಶಿವದೇವಾಲಯದಲ್ಲಿ ಕುಳಿತು ಧ್ಯಾನಮಾಡುವುದು ಒಳ್ಳೆಯದು.

ಒಂದು ದಿನ ಬೆಳಿಗ್ಗೆ ೧೦ ಘಂಟೆ ಸುಮಾರಿನಲ್ಲಿ ಹೆಚ್ಚು ಪುಣ್ಯಸಂಗ್ರಹ ಮಾಡುವ ಅಪೇಕ್ಷೆಯಿಂದ ಮಂದಾಕಿನೀ ನದಿಗೆ ಸ್ನಾನಕ್ಕಾಗಿ ಹೋದೆ. ಆಗ ನೀರು ೧೦ರಿಂದ – ೨೦ ಸೆಂಟಿಗ್ರೇಡಿನಷ್ಟು ತಂಪಾಗಿತ್ತೆಂದು ನನಗೆ ಗೊತ್ತಿತ್ತು. ಬೇಗ ಒಂದೆರಡು ಮುಳುಗು ಹಾಕಿ ಬಂದುಬಿಡುವೆನೆಂದುಕೊಂಡಿದ್ದೆ. ನೀರಿನೊಳಗೆ ಧುಮುಕುತ್ತಿದ್ದಂತೆ ಅತಿಯಾದ ಶೀತಲತೆಯಿಂದ ನನ್ನ ಮೈ ಮರಗಟ್ಟಿ ಹೋಯಿತು. ಆ ಸಮಯದಲ್ಲಿ ನನ್ನ ಶರೀರ ಸಂರಕ್ಷಣೆಗೆ ಇದ್ದ ಒಂದೇ ಉಪಾಯವೆಂದರೆ ನೀರಿನಿಂದ ಹೊರಬರುವುದು. ನನ್ನ ಸಂಪೂರ್ಣ ಬಲವನ್ನು ಬಳಸಿ ಶ್ರೀಕೇದಾರೇಶ್ವರ ಮಹಾದೇವ ಶಿವನ ಅನುಗ್ರಹದಿಂದ ಹೇಗೋ ನೀರಿನಿಂದ ಹೊರಬಂದು, ಆ ವಿಪತ್ತಿನಿಂದ ಪಾರಾದೆ. ಇನ್ನು ಕೆಲವು ಕ್ಷಣ ತಡಮಾಡಿದ್ದರೂ, ತಡೆಯಲಾಗದ ಆ ಕೊರೆತ ನನ್ನ ಶರೀರವನ್ನು ಮಂದಾಕಿನಿಯ ತಳ ಮುಟ್ಟಿಸಿ, ನನ್ನ ಮಹಾಸಮಾಧಿಯಾಗಿ ಹೋಗುತ್ತಿತ್ತು.

ಈ ಪ್ರಸಂಗವಾದ ಮೇಲೆ ಪ್ರಾರ್ಥನೆ, ಧ್ಯಾನ, ಮಂತ್ರ, ಜಪ ಪಾರಾಯಣ ಮೊದಲಾದವುಗಳನ್ನು ಮಾಡುತ್ತಾ ಶಿವನ ದೇವಾಲಯದಲ್ಲೇ ಹೆಚ್ಚು ಕಾಲ ಕಳೆಯತೊಡಗಿದೆ. ನನ್ನ ಪವಿತ್ರಯಾತ್ರೆಯ ಆನಂದವನ್ನು ಅನುಭವಿಸುತ್ತಾ, ಕೈಲಾಸಪರ್ವತಕ್ಕೆ ನನ್ನ ಯಾತ್ರೆ ಮುಂದುವರೆಸುವ ಉದ್ದೇಶದಿಂದ ಕೆಲವು ದಿನಗಳ ನಂತರ ಬದರೀಕ್ಷೇತ್ರಕ್ಕೆ ಹಿಂತಿರುಗಿದೆ.

ಈ ಮಧ್ಯೆ, ಬದರೀನಾಥದ ಪೂರ್ವಕ್ಕಿರುವ ತುಂಗನಾಥ ಮಹಾದೇವ ದೇವಾಲಯಕ್ಕೆ ಹೊರಟಿದ್ದ ಯಾತ್ರಿಗಳೊಡನೆ ನಾನೂ ಸೇರಿಕೊಂಡೆ. ಹಿಮಾಲಯದ ಪವಿತ್ರದೇವಾಲಯಗಳ ಅನ್ವೇಷಣೆ ಮಾಡುತ್ತಿದ್ದಾಗ ಶ್ರೀಶಂಕರರೇ ಈ ದೇವಾಲಯವನ್ನೂ ಸ್ಥಾಪಿಸಿದ್ದರು. ಪಂಚಕೇದಾರಗಳಲ್ಲಿ ಇದೂ ಒಂದು. ಇದು ಸಮುದ್ರಮಟ್ಟದಿಂದ ೧೨,೦೦೦ ಅಡಿ ಎತ್ತರದಲ್ಲಿದೆ. ಇದೇ ಪಂಚಕೇದಾರಗಳಲ್ಲಿ ಅತ್ಯಂತ ಎತ್ತರದಲ್ಲಿರುವ ದೇವಾಲಯ. ಇದು ವಿರಳ ಜನಸಂಖ್ಯೆಯಿರುವ ಪ್ರದೇಶ. ಈ ಸ್ಥಳದ ಕೊರೆಯುವ ಚಳಿ ಜನರನ್ನು ಇಲ್ಲಿ ಉಳಿಯದಂತೆ ಮಾಡುತ್ತದೆ. ದೇವಾಲಯದ ಕಾರ್ಯಕಾರಿ ಸಮಿತಿ ಅಧಿಕಾರಿಗಳು, ಅರ್ಚಕರು, ಅವರ ಕುಟುಂಬ ಮತ್ತು ಎಲ್ಲೋ ಕೆಲವು ಯಾತ್ರಿಕರು ಮಾತ್ರ ಎಲ್ಲಾ ತೊಂದರೆಗಳನ್ನೂ ಸಹಿಸಿಕೊಂಡು ಇಲ್ಲಿ ವಾಸಿಸುತ್ತಾರೆ.

## ಟಿಬೆಟ್ಟಿನ ಕಡೆಗೆ

ಬದರೀನಾಥ ಕೇದಾರನಾಥ, ತುಂಗನಾಥ ದೇವಾಲಯಗಳನ್ನು ಸಂದರ್ಶಿಸಿ ಅಲ್ಲಿ ನನ್ನ ಸೇವೆಯನ್ನು ಸಲ್ಲಿಸಿ, ಪವಿತ್ರ ಕೈಲಾಸ ಪರ್ವತ ಮತ್ತು ಮಾನಸಸರೋವರದ ಕಡೆಗೆ ನನ್ನ ಪ್ರಯಾಣ ಆರಂಭಿಸಿದೆ. ಟಿಬೆಟ್ ದೇಶವನ್ನು ಪ್ರವೇಶಿಸಲು ಎರಡು ಕಣಿವೆಗಳನ್ನು ದಾಟಬೇಕೆಂದು ನಾನು ಕೇಳಿ ತಿಳಿದಿದ್ದೆ. ಬದರೀನಾಥದ ಹತ್ತಿರದ 'ಮನಾ' ಕಣಿವೆ, ಮತ್ತೊಂದು 'ನೀತಿ' ಕಣಿವೆ. ಮನಾ ಕಣಿವೆ ಅತ್ಯಂತ ಎತ್ತರದಲ್ಲಿದೆ. ಈ ಮಾರ್ಗದ ಮೂಲಕ ಸಾಗಬೇಕಾದ ಯಾತ್ರಿಗಳು ಕಡಿದಾದ ಇಳುಕಲುಗಳನ್ನು ಇಳಿದು ಏರಬೇಕಾದಾಗ ಅನೇಕ ರೀತಿಯ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಅದಕ್ಕಾಗಿ ನನಗೆ ನೀತಿ ಕಣಿವೆ ಮೂಲಕ ಹೋಗಬೇಕೆಂದು ಸಲಹೆ ಮಾಡಿದರು. ಇದು ಮನಾ ಕಣಿವೆಗಿಂತ ಕಡಿಮೆ ಎತ್ತರದಲ್ಲಿದ್ದು, ಸಾಗಲು ಸುಲಭವಾಗಿದೆ. ಆದರೆ ದಾರಿ ದೀರ್ಘವಾಗಿದ್ದು, ಒಂದು ವಾರದಷ್ಟು ಕಾಲ ಹೆಚ್ಚು ಪ್ರಯಾಣ ಮಾಡಬೇಕಾಗುತ್ತದೆ. ಈ ದಾರಿಯಲ್ಲಿ ಸಾಗಲು ಮತ್ತೊಂದು ಆಕರ್ಷಣೆಯೂ ಇದೆ. ಸಮುದ್ರ ಮಟ್ಟದಿಂದ ೭,೨೦೦ ಅಡಿ ಎತ್ತರದಲ್ಲಿರುವ ಕಲ್ಪೇಶ್ವರ ದೇವಾಲಯವನ್ನೂ ಸಂದರ್ಶಿಸಬಹುದು.

ಒಂದು ವಾರಕ್ಕೆ ಬೇಕಾಗುವಷ್ಟು ಚಟ್ಟು (ಕಡಲೇ ಹಿಟ್ಟು) ತಯಾರು ಮಾಡಿಕೊಂಡೆ. ಇದಕ್ಕೆ ಉಪ್ಪು, ನೀರು ಬೆರೆಸಿ ಸೇವಿಸಬೇಕು. ಹಸಿವಾದಾಗ ಆಯಾಯ ಸ್ಥಳದಲ್ಲಿ ಸಿಗುವ ಹಣ್ಣುಗಳ ಜೊತೆಗೆ ಈ ಹಿಟ್ಟನ್ನು ನನ್ನ ಆಹಾರವಾಗಿ ಮಾಡಿಕೊಂಡೆ. ಕೃಷಿ ಮಾಡಿದ ಸಮತಟ್ಟಾದ ಹಾದಿಯಲ್ಲಿ ಹೀಗೇ ಸಾಗುತ್ತಾ ಕಲ್ಪೇಶ್ವರ ಶಿವದೇವಾಲಯವನ್ನು ತಲುಪಿದೆ. ಪೂರ್ವದಲ್ಲಿ ಅಲ್ಲಿ ಕೆಲವು

ತಪಸ್ವೀ ಸಾಧುಗಳು ತಪಸ್ಸನ್ನು ಆಚರಿಸಿದಂತೆ ತೋರುತ್ತದೆ. ದೇವಾಲಯದಲ್ಲಿ ಪೂಜೆ-ಪ್ರಾರ್ಥನೆಗಳನ್ನು ಸಲ್ಲಿಸಿ, ಸಮೀಪದಲ್ಲಿದ್ದ ಒಂದು ಮನೆಯ ಕಡೆಗೆ ಸಾಗಿದೆ. ಆ ಮನೆಯಲ್ಲಿ ಒಂದು ವಿಶಾಲವಾದ ಕೊಠಡಿ ಇತ್ತು. ಅಲ್ಲಿ ಸಾಧಾರಣ ಮನೆಗೆ ಅಗತ್ಯವಾಗುವ ವಿವಿಧ ವಸ್ತುಗಳನ್ನು ಬೇರೆ ಬೇರೆ ಮೂಲೆಗಳಲ್ಲಿ ಇರಿಸಲಾಗಿತ್ತು. ಮನೆಯ ಮಧ್ಯಭಾಗದಲ್ಲಿ ಒಲೆಯ ಮುಂದೆ ಕುಳಿತು, ತನ್ನ ಕಂದನನ್ನು ಮಡಿಲಲ್ಲಿಟ್ಟುಕೊಂಡು ಹೆಂಗಸೊಬ್ಬಳು ಅಡುಗೆ ಮಾಡುವುದರಲ್ಲಿ ನಿರತಳಾಗಿದ್ದಳು. ಮಣೆ, ಲಟ್ಟಣಿಗೆ ಏನೂ ಇಲ್ಲದೆ ಕಲಸಿದ ಹಿಟ್ಟನ್ನು ಎರಡೂ ಕೈಯಲ್ಲಿ ಬಡಿಯುತ್ತಲೇ ಆಕೆ ರೊಟ್ಟಿ ಮಾಡುತ್ತಿದ್ದಳು. ಅದನ್ನು ಕಾವಲಿಯ ಮೇಲೆ ಹಾಕುತ್ತಿದ್ದಂತೆ ಅದು ಚೆನ್ನಾಗಿ ಉಬ್ಬುತ್ತಿತ್ತು. ಬಿಸಿ ಬಿಸಿ ರೊಟ್ಟಿಗಳನ್ನು ತರಕಾರಿ ಹಾಕಿ ಮಾಡಿದ ಒಂದು ರೀತಿಯ ವ್ಯಂಜನದೊಂದಿಗೆ ತಟ್ಟೆಗೆ ಹಾಕಿ, 'ಬಾಬಾ, ಲೋ' ಎಂದು ಹಿಂದಿಯಲ್ಲಿ ಹೇಳುತ್ತಾ ಆಕೆ ನನಗೆ ಕೊಟ್ಟಳು.

ಆಕೆಯಿಂದ ಭಿಕ್ಷೆಯನ್ನು ಸ್ವೀಕರಿಸಿದ ನಂತರ ಆಕೆಗೆ ಕೃತಜ್ಞತೆಗಳನ್ನು ಸಲ್ಲಿಸಿ ನನ್ನ ಪ್ರಯಾಣ ಮುಂದುವರೆಸಿ, ಬೆಟ್ಟ ಏರುತ್ತಾ ಸಾಗಿದೆ. ಒಂದು ಸಾಗುವಳಿ ಮಾಡಿದ ಕ್ಷೇತ್ರದಿಂದ ಮತ್ತೊಂದು ಸಾಗುವಳಿ ಮಾಡಿದ ಕ್ಷೇತ್ರದ ಕಡೆಗೆ ಸಾಗುತ್ತಾ, ಹತ್ತುತ್ತಾ ಇಳಿಯುತ್ತಾ ನಾನು ಎತ್ತರಕ್ಕೆ ಏರತೊಡಗಿದೆ.

ಆ ಕಾಲದಲ್ಲಿ ಎಲ್ಲೋ ಕೆಲವು ಯಾತ್ರಿಗಳು ಮಾತ್ರ ಕೈಲಾಸ ಪರ್ವತಕ್ಕೆ ಹೋಗುತ್ತಿದ್ದರು. ಟಿಬೆಟ್ಟಿನ ಕಡೆಗೆ ಹೋಗಬೇಕಾದ ದಾರಿ ತಿಳಿಯದೆ ನಾನೊಬ್ಬನೇ ಯಾತ್ರಿಕ ಸಾಗುತ್ತಿದ್ದೆ. ಇಂತಹ ಸಂದರ್ಭ ಒದಗಿದಾಗ ಕುರಿಮಂದೆಯೊಡಗೂಡಿದ ಕುರುಬರನ್ನು ಹಿಂಬಾಲಿಸಿ ಸಾಗಬೇಕೆಂದು ನನಗೆ ಸಲಹೆಯಿತ್ತು. ಈ ಕುರುಬರು ಭಾರತ ಮತ್ತು ಟಿಬೆಟ್ ದೇಶದ ಸರಹದ್ದಿನ ಪರ್ವತ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಎತ್ತರೆತ್ತರದ ಪರ್ವತಶಿಖರಗಳನ್ನೂ ಲೀಲಾಜಾಲವಾಗಿ ಹತ್ತಿಬಿಡುತ್ತಿದ್ದರು. ಎಲ್ಲಾ ವಿಧವಾದ ಅಸಾಧಾರಣ ಪ್ರಕೃತಿ ವಿಕೋಪಗಳನ್ನು ಎದುರಿಸಬಲ್ಲ ಎದೆಗಾರಿಕೆಯುಳ್ಳವರು ಇವರು. ಕುರಿ, ಮೇಕೆ, ಹೇಸರುಗತ್ತೆ, ಯಾಕ್, ಕುದುರೆ ಮೊದಲಾದ ಪ್ರಾಣಿಗಳ ಸಾಕಣೆಯೇ ಇಲ್ಲಿನ ಪ್ರಮುಖ ಕಸುಬು. ಅಕ್ಕಿ ಬೇಳೆ ಉಪ್ಪು ಮೊದಲಾದ ಗೃಹೋಪಯೋಗಿ ಪದಾರ್ಥಗಳ ಹೊರೆಯನ್ನು ಹೊರಲು ಈ ಪ್ರಾಣಿಗಳನ್ನು ವಿಶೇಷವಾಗಿ ಬಳಸುತ್ತಿದ್ದರು. ಮಣಿ, ಮುತ್ತು, ಬಳೆ, ಸರ ಮೊದಲಾದ ಸ್ತ್ರೀಯರು ಆಭರಣವಾಗಿ ಉಪಯೋಗಿಸುವ ಪದಾರ್ಥಗಳ ವ್ಯಾಪಾರ ಇವರ ಉಪಕಸುಬು. ಇಂತಹ ಆಭರಣಗಳು ಟಿಬೆಟ್ ದೇಶದಲ್ಲಿ ದೊರೆಯುವುದಿಲ್ಲ. ಸೆಣಬಿನ ಚೀಲಗಳಲ್ಲಿ ಈ ವಸ್ತುಗಳನ್ನು ಕಟ್ಟಿ, ಈ ಪ್ರಾಣಿಗಳ ಮೇಲೆ ಹೊರೆ ಹೇರಿ ಅಲ್ಲಿ ವ್ಯಾಪಾರಕ್ಕಾಗಿ ಒಯ್ಯುತ್ತಿದ್ದರು. ಅಲ್ಲಿಂದ, ಉಲ್ಲನ್ ಪದಾರ್ಥಗಳನ್ನು ತಯಾರು ಮಾಡುವ ಉತ್ತರ ಭಾರತದ ಉಲ್ಲನ್ ಮಿಲ್‌ಗಳಿಗೆ, ಕಚ್ಚಾ ಉಲ್ಲನ್‌ಗಳನ್ನು ಪೂರೈಸಲು ಕುದುರೆ, ಹೇಸರಗತ್ತೆಗಳ ಮೇಲೆ ಉಲ್ಲನ್ ಹೊರೆಯನ್ನು ಕಟ್ಟಿಕೊಂಡು ಬರುತ್ತಿದ್ದರು.

ಇಂತಹ ವ್ಯಾಪಾರಿಗಳ ಗುಂಪೊಂದನ್ನು ಸೇರಿಕೊಂಡೆ. ಅವರದೇ ಬಿಡಾರಗಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದೆ. ಅವರ ಬಿಡಾರದ ಒಂದು ಮೂಲೆಯಲ್ಲಿ ನನಗೆ ವಿಶ್ರಮಿಸಲು ಅವಕಾಶ ಕೊಡುತ್ತಿದ್ದರು. ಅವರು ತಮ್ಮ ಬಳಿಯಿದ್ದ ಮುದಿಯಾದ ಅಥವಾ ದುರ್ಬಲವಾದ ಕುರಿಯನ್ನೋ, ಮೇಕೆಯನ್ನೋ ಕೊಂದು ಅದರ ಮಾಂಸವನ್ನು ಊಟಮಾಡುತ್ತಿದ್ದರು. ನಾನು ನನ್ನ ಬಳಿಯಿದ್ದ ಚಟ್ಟುವಿಗೆ ಉಪ್ಪು ನೀರು ಬೆರೆಸಿ ಊಟ ಮಾಡುತ್ತಿದ್ದೆ. ಅವರು ಪ್ರಾಣಿ ಹತ್ಯೆ ಮಾಡುವಾಗ ನನ್ನನ್ನು ದೂರ ಹೋಗಲು ಹೇಳುತ್ತಿದ್ದರು.

ಹೀಗೆ ಎತ್ತರ ಎತ್ತರಕ್ಕೆ ಏರುತ್ತಾ ಏರುತ್ತಾ ಭಾರತೀಯ ಪೋಲೀಸ್ ಚೆಕ್‌ಪೋಸ್ಟ್ ಬಳಿಗೆ ಬಂದೆವು. ಚೆಕ್‌ಪೋಸ್ಟ್ ಹತ್ತಿರದ ದಾರಿ ತುಂಬಾ ಕಡಿದಾಗಿತ್ತು. ಕುದುರೆಗಳು ಯಾಕ್‌ಗಳೂ ಕೂಡ ಅಲ್ಲಿ ಮೇಲುಬ್ಬಸ ಪಡುತ್ತಿದ್ದವು. ಭಾರತ ಸರ್ಕಾರದ ಅನುಮತಿಯಿಲ್ಲದೆ ಯಾರೂ ಟಿಬೆಟ್ಟನ್ನು ಪ್ರವೇಶಿಸುವಂತಿರಲಿಲ್ಲ. ಪೋಲೀಸರು ಅನುಮತಿ ಪತ್ರ ಕೇಳಿದರು. ನಾನು ಕೈಲಾಸ-ಮಾನಸ ಸರೋವರದ ಯಾತ್ರಿಕನೆಂದು ಹೇಳಿದೆ. ಕೇವಲ ೩೫ ವಯಸ್ಸಿನ ಯುವ ಸಂನ್ಯಾಸಿ ಆಗಿದ್ದುದರಿಂದ, ಕಮ್ಯುನಿಸ್ಟ್ ಆದ ನಾನು ಸನ್ಯಾಸಿ ವೇಷದಿಂದ ಭಾರತದಿಂದ ತಪ್ಪಿಸಿಕೊಂಡು ಕಮ್ಯುನಿಸ್ಟ್ ವಿಚಾರಗಳ ಕುರಿತು ಶಿಕ್ಷಣ ಪಡೆಯಲು, ಚೀನಾ ದೇಶಕ್ಕೆ ಹೋಗುತ್ತಿರುವೆನೆಂದು ನನ್ನ ಮೇಲೆ ಸಂಶಯಪಟ್ಟರು. ನಾನು ನನ್ನ ಹೆಸರನ್ನು ಹೇಳಿ ರಾಮಕೃಷ್ಣ ಮಿಷನ್ನಿಗೆ ಸೇರಿದವನೆಂದೂ, ಈಗ ಪ್ರಸ್ತುತ ವೃಂದಾವನದ ಸೇವಾಶ್ರಮದಲ್ಲಿ ಸೇವೆ ಸಲ್ಲಿಸುತ್ತಿರುವೆನೆಂದೂ ವಿವರವಾಗಿ ತಿಳಿಸಿ, ನನಗೆ ಕೊಟ್ಟಿದ್ದ ಪತ್ರವೊಂದನ್ನು ತೋರಿಸಿದೆ.

ನಾನು ಹೇಳಿದ ವಿಚಾರಗಳೆಲ್ಲ ಸತ್ಯವೆಂದು ಮನವರಿಕೆಯಾದ ಮೇಲೆ ನನ್ನನ್ನು ಆ ಕಣಿವೆ ದಾಟಿ ಸಾಗಲು ಅನುಮತಿ ಕೊಟ್ಟರು. ಮತ್ತು ನನಗೆ ಈ ನೀತಿ ಕಣಿವೆಯ ಮೂಲಕವಾಗಿಯೇ ಹಿಂತಿರುಗಿ ಬರಬೇಕೆಂದು ಆದೇಶಿಸಿದರು. ಆದರೆ ಪರಿಸ್ಥಿತಿಗಳು ಬೇರೆಯೇ ಆದವು. ನಾನು ಭಾರತಕ್ಕೆ ಹಿಂತಿರುಗಬೇಕಾದಾಗ ಬೇರೆಯೇ ಮಾರ್ಗವನ್ನು ಅನುಸರಿಸಬೇಕಾಯಿತು; 'ಹೋತಿ ಕಣಿವೆ'ಯ ಮೂಲಕ ಹಿಂತಿರುಗುವಂತಾಯಿತು. ನನ್ನ ಕುರುಬ ಸಂಗಾತಿಗಳೊಡನೆ ನಾನು ಟಿಬೆಟ್ ದೇಶದ ಸರಹದ್ದನ್ನು ದಾಟಿ, ಆ ದೇಶವನ್ನು ಪ್ರವೇಶಿಸಿದೆ. *(ಮುಂದುವರಿಯುವುದು)*

**ದೇವರು ಪ್ರಹ್ಲಾದನ ಪ್ರಾರ್ಥನೆಗೆ ಸಂತುಷ್ಟನಾಗಿ, ''ಏನು ವರ ಬೇಕು, ಕೇಳು'' ಎಂದನು. ಅದಕ್ಕೆ ಪ್ರಹ್ಲಾದ, ''ದೇವರೆ, ಯಾರು ನನಗೆ ತೊಂದರೆ ಕೊಟ್ಟರೊ ಅವರನ್ನು ಕ್ಷಮಿಸು. ಅವರನ್ನು ಶಿಕ್ಷಿಸುವುದರಿಂದ ನೀನೆ ಶಿಕ್ಷಿಸಿಕೊಳ್ಳುವೆ. ಏಕೆಂದರೆ ಚರಾಚರ ವಸ್ತುಗಳಲ್ಲೆಲ್ಲಾ ನೀನೇ ಇರುವೆ'' ಎಂದನು.**

*('ಶ್ರೀಗುರುದೇವರ ವಚನ' ದಲ್ಲಿ ಶ್ರೀರಾಮಕೃಷ್ಣರು)*

# ಯುವಚೇತನ



## ಆಂಜನೇಯನ ಆದರ್ಶ

**ಶಿಷ್ಯ:** ನಾವೀಗ ಯಾವ ಗುರಿಯನ್ನು ಅನುಸರಿಸಬೇಕು?

**ಸ್ವಾಮೀಜಿ:** ಮಹಾವೀರನನ್ನು ನಮ್ಮ ಗುರಿಯಾಗಿಟ್ಟುಕೊಳ್ಳಬೇಕು. ರಾಮಚಂದ್ರನ ಆಣತಿಯಂತೆ ಅವನು ಹೇಗೆ ಸಮುದ್ರವನ್ನೇ ದಾಟಿದ! ಅವನಿಗೆ ಜೀವನ ಮರಣ ಯಾವುದರ ಮೇಲೂ ಗಮನ ವಿರಲಿಲ್ಲ. ಅವನು ಇಂದ್ರಿಯಗಳನ್ನು ಸಂಪೂರ್ಣವಾಗಿ ತನ್ನ ವಶದಲ್ಲಿಟ್ಟುಕೊಂಡಿದ್ದ, ತೀಕ್ಷ್ಣಮತಿಯಾಗಿದ್ದ. ನೀವೀಗ ಈ ಸೇವೆಯ ಮಹೋದ್ದೇಶದ ಮೇಲೆ ನಿಮ್ಮ ಜೀವನವನ್ನು ಕಟ್ಟಬೇಕು. ಅದರ ಮೂಲಕ ಇತರ ಎಲ್ಲಾ ಉದ್ದೇಶಗಳೂ ಕ್ರಮೇಣ ವಿಕಸಿಸುವುವು. ಮರುಮಾತಿಲ್ಲದೆ ಗುರುಮಾತಿಗೆ ವಿಧೇಯರಾಗಿ ನಡೆಯುವುದು, ಮತ್ತು ಬ್ರಹ್ಮಚಾರಿ ಜೀವನ ನಡೆಸುವುದು, ಇದೇ ಜಯದ ರಹಸ್ಯ. ಹನುಮಂತ ಒಂದು ಕಡೆ ಸೇವೆಯ ಮಹೋದ್ದೇಶವನ್ನು, ಇನ್ನೊಂದು ಕಡೆ ಇಡೀ ಜಗತ್ತೇ ಬೆರಗಾಗುವಂತಹ ಸಿಂಹಸದೃಶ ಧೈರ್ಯವನ್ನು ಪ್ರಕಟಿಸುತ್ತಾನೆ. ರಾಮನ ಕಲ್ಯಾಣಕ್ಕಾಗಿ ಪ್ರಾಣವನ್ನೇ ಅರ್ಪಿಸಲು ಅವನು ಸ್ವಲ್ಪವೂ ಅನುಮಾನಿಸಲಿಲ್ಲ. ರಾಮನ ಸೇವೆಯ ಹೊರತು ಉಳಿದುದರಲ್ಲೆಲ್ಲ ಅವನಿಗೆ ತಾತ್ಸಾರ. ಬ್ರಹ್ಮ ಶಿವ ಮುಂತಾದ ಈ ಜಗತ್ತಿನ ದೇವತೆಗಳ ಪದವಿಯೆಲ್ಲಾ ಅವನಿಗೆ ನಿಸ್ಸಾರ. ಶ್ರೀರಾಮನ ಅಣತಿಯಂತೆ ನಡೆಯುವುದೊಂದೇ ಅವನ ಜೀವನ ವ್ರತ. ಅಂತಹ ಹೃತ್ಪೂರ್ವಕ ಭಕ್ತಿ ಬೇಕಾಗಿದೆ. ಖೋಲ್ ಮತ್ತು ಕರ್ತಾಲ್‌ಗಳನ್ನು ನುಡಿಸುತ್ತಾ ತಾಳಕ್ಕೆ ಸರಿಯಾಗಿ ಕುಣಿಯುತ್ತಾ ಜನರೆಲ್ಲಾ ಅಧೋಗತಿಗಿಳಿದಿದ್ದಾರೆ. ಮೊದಲನೆಯದಾಗಿ ಅಜೀರ್ಣವ್ಯಾಧಿಯುಳ್ಳ ಜನಾಂಗ. ಜೊತೆಗೆ ಹೀಗೆ ಕುಣಿತಕ್ಕೂ ಪ್ರಾರಂಭಿಸಿದರೆ ಅವರು ಹೇಗೆ ತಾನೆ ಇಷ್ಟೊಂದು ಕಷ್ಟವನ್ನು ಸಹಿಸಬಲ್ಲರು? ಯಾವುದರ ಪ್ರಥಮ ಗುಣವೇ ಪವಿತ್ರತೆಯಾಗಿದೆಯೋ ಅಂತಹ ಉಚ್ಚ ಸಾಧನೆಯನ್ನು ಅನುಕರಿಸಹೋಗಿ ಸಂಪೂರ್ಣ ತಾಮಸದಲ್ಲಿ ಮುಳುಗಿ ಹೋಗಿರುವರು. ನೀನು ಪ್ರತಿಯೊಂದು ಗ್ರಾಮ ಮತ್ತು ಪಟ್ಟಣಕ್ಕೆ ಹೋಗಿ ನೋಡು, ಎಲ್ಲೆಲ್ಲೂ ನಿನಗೆ ಈ ಕುಣಿತವೇ ಕಂಡುಬರುವುದು. ದೇಶದಲ್ಲಿ ತಮಟೆಗಳನ್ನು ತಯಾರಿಸುವುದಿಲ್ಲವೆ? ಭರತಖಂಡದಲ್ಲಿ ತುತ್ತೂರಿ, ಡಮರುಗಳು ಸಿಗುವುದಿಲ್ಲವೆ? ಹುಡುಗರೆಲ್ಲಾ ಈ ತೂರ್ಯವಾಣಿಯನ್ನು ಕೇಳುವಂತೆ ಮಾಡಿ. ಬಾಲ್ಯದಿಂದ ಈ ಕೋಮಲಸ್ವಭಾವದ ಸಂಗೀತವನ್ನು ಕೇಳಿ ಕೇಳಿ, ಕೀರ್ತನೆಗಳನ್ನು ಕೇಳಿ ದೇಶವೆಲ್ಲಾ ನಾರಿಯರ ದೇಶವಾಗಿ ಪರಿಣಮಿಸಿದೆ. ಇದಕ್ಕಿಂತ ಬೇರೆ ಅಧೋಗತಿ ಯಾವುದಿದೆ? ಕವಿಯ ಕಲ್ಪನೆ ಕೂಡ ಈ ಚಿತ್ರವನ್ನು ಕಲ್ಪಿಸಲಾರದು. ತಮಟೆ ಕಹಳೆಯನ್ನು ಕೂಗಿಸಬೇಕು. ತಮಟೆಗಳನ್ನು ರಣರಂಗದಲ್ಲಿ ಬಾರಿಸಿದಂತೆ ಬಾರಿಸಬೇಕು. 'ಮಹಾವೀರ, ಮಹಾವೀರ' ಎಂಬ ಘರ್ಜನೆ ನಮ್ಮ ಬಾಯಿಂದ ಮೊರೆಯುತ್ತಿರಬೇಕು. 'ಹರ, ಹರ, ಓಂ, ಓಂ!' ಎಂಬ ನಿನಾದದಿಂದ ದಶ ದಿಕ್ಕುಗಳೂ ಪ್ರತಿಧ್ವನಿತವಾಗುವಂತೆ ಮಾಡಬೇಕು. ಮಾನವನ ಮೃದು ಹೃದಯವನ್ನು ಮಿಡಿಯುವಂತಹ ಸಂಗೀತ ಇಂದು ನಮಗೆ ಬೇಕಾಗಿಲ್ಲ – ಗೆಜ್ಜೆ ಧ್ವನಿಗಳ ನಾಟ್ಯ



ಸಂಗೀತವನ್ನು ನಿಲ್ಲಿಸಿ, ಧ್ರುಪದ ಸಂಗೀತಕ್ಕೆ ಕಿವಿಗೊಡುವಂತೆ ಮಾಡಬೇಕು. ಗಂಭೀರವಾದ ವೇದಘೋಷದ ಗರ್ಜನೆಯಿಂದ ದೇಶವನ್ನೆಲ್ಲ ತುಂಬಬೇಕು. ಪ್ರತಿಯೊಂದರಲ್ಲಿಯೂ ಪುರುಷ ಸಿಂಹನ ಕೆಚ್ಚೆದೆ ವ್ಯಕ್ತವಾಗುವಂತೆ ಮಾಡಬೇಕು. ಈ ಧ್ಯೇಯದ ಮೇಲೆ ನಿನ್ನ ಶೀಲವನ್ನು ರೂಪಿಸಬಲ್ಲೆಯಾದರೆ ಸಾವಿರಾರು ಜನ ನಿಮ್ಮನ್ನು ಹಿಂಬಾಲಿಸುವರು. ಆದರೆ ನಿನ್ನ ಧ್ಯೇಯದಿಂದ ಒಂದು ಅಂಗುಲವೂ ಹಿಮ್ಮೆಟ್ಟಬೇಡ, ಎದೆಗೆಡಬೇಡ. ಊಟ ಮಾಡುವಾಗ, ಉಡುಪು ಧರಿಸುವಾಗ, ಮಲಗಿರುವಾಗ, ಹಾಡುವಾಗ, ಆಟವಾಡುವಾಗ, ಸುಖದುಃಖ ಎಲ್ಲಾ ಅವಸ್ಥೆಯಲ್ಲೂ ಅತ್ಯುಚ್ಚ ಆಂತರಿಕ ಶಕ್ತಿ ನಿನ್ನಲ್ಲಿ ವಿಕಸಿಸಲಿ. ಆಗ ಮಾತ್ರ ನೀನು ಮಹಾಶಕ್ತಳಾದ ಜಗನ್ಮಾತೆಯ ಕೃಪೆಗೆ ಪಾತ್ರನಾಗುವೆ. ✷

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೮, ಪು. ೨೨೮–೨೯)*

# ಅಸತೋ ಮಾ ಸದ್ಗಮಯ...

## ಪರಿವರ್ತನೆ – ಬೆಳವಣಿಗೆ

ಸ್ವಾಮಿ ಧರ್ಮವ್ರತಾನಂದ

**ವೇದಸಂಸ್ಕೃತಿಯ ಅತ್ಯುನ್ನತ ಮೌಲ್ಯವೂ, ಶ್ರೇಷ್ಠ ಭಾವನಗಳ ಅತ್ಯುತ್ತಮ ಉದಾಹರಣೆಯೂ ಆಗಿದೆ 'ಅಸತೋ ಮಾ' ಎಂದು ಆರಂಭವಾಗುವ ಶಾಂತಿಮಂತ್ರ. ಆಧುನಿಕ ಸಮಾಜವು ಈ ಮಂತ್ರದಿಂದ ಮೈಗೂಡಿಸಿಕೊಳ್ಳಬೇಕಾದ ವಿಚಾರಗಳನ್ನು ಕುರಿತು ಬರೆದಿರುವ ಲೇಖಕರು ಮಂಗಳೂರು ರಾಮಕೃಷ್ಣ ಬಾಲಕಾಶ್ರಮದ ಪಾಲಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.**

**ಆಹಾರನಿದ್ರಾ ಭಯ ಮೈಥುನಂ ಚ**
**ಸಾಮಾನ್ಯಮೇತತ್ ಪಶುಭಿರ್ನರಾಣಾಂ ।**
**ಧರ್ಮೋಹಿ ಏಕೋ ಅಧಿಕಃ ವಿಶೇಷಃ**
**ಧರ್ಮೇಣ ಹೀನಃ ಪಶುಭಿರ್ಸಮಾನಃ ॥**

(ಹಸಿವು, ನಿದ್ದೆ, ಭಯ ಮತ್ತು ಸಂತತಿ ಉತ್ಪಾದನೆ ಇವು ಮನುಷ್ಯ ಮತ್ತು ಪ್ರಾಣಿಗಳಲ್ಲಿ ಸಮಾನ. ಆದರೆ ಧರ್ಮವೊಂದು ಹೆಚ್ಚು ಮನುಷ್ಯನಲ್ಲಿದೆ. ಈ ಧರ್ಮವಿಲ್ಲದವನು ಪ್ರಾಣಿಗೆ ಸಮನಾಗುತ್ತಾನೆ.)

ಪ್ರತಿಯೊಂದು ಧರ್ಮವೂ ಮಾನವನ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತದೆ ಮತ್ತು ಅವನಿಗೆ ಸೃಷ್ಟಿಯಲ್ಲಿ ಒಂದು ಉತ್ತಮ ಸ್ಥಾನವನ್ನು ಕೊಟ್ಟಿದೆ. ಕಾರಣ, ಆತ ಒಳಿತು ಕೆಡುಕುಗಳನ್ನು ಯೋಚಿಸಬಲ್ಲ, ತನ್ನ ಮನಸ್ಸನ್ನು ಹತೋಟಿಯಲ್ಲಿಡಬಲ್ಲ, ಬುದ್ಧಿಯನ್ನು ಉಪಯೋಗಿಸಬಲ್ಲ ಮತ್ತು ಪ್ರಕೃತಿಯ ಸವಾಲುಗಳನ್ನು ಮೆಟ್ಟಿನಿಂತು ಗೆಲ್ಲಬಲ್ಲ. ಅಲ್ಲದೆ ತನ್ನ ನಿಜ ಅಂತಸ್ಸತ್ವವನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲ. ಅದಕ್ಕೆ ಬೇಕಾದ ಮಾರ್ಗವನ್ನು ತಿಳಿಸುವ ಹಂಬಲವನ್ನು ಪ್ರತಿಯೊಂದು ರೀತಿಯಲ್ಲೂ ಧರ್ಮವು ಅವನಿಗೆ ತೋರಿಸಿಕೊಡುತ್ತದೆ.

ನಾವು ಸಾಮಾನ್ಯವಾಗಿ ಕಾಣುವಂತೆ, ಸಭೆಗಳನ್ನು ಆರಂಭಿಸುವ ಮುನ್ನ ಪ್ರಾರ್ಥನೆಯನ್ನು ಮಾಡುತ್ತಾರೆ. ಇದರಲ್ಲಿ ಸಾಮಾನ್ಯವಾಗಿ ಶಾಂತಿಮಂತ್ರಗಳು, ವೇದಪಠಣ – ಇವು ಕಂಡುಬರುತ್ತವೆ.

'ಯಶ್ಛಂದಾಸಾಮೃಷಭೋ...', 'ಆಪ್ಯಾಯಂತು ಮಮಾಂಗಾನಿ', 'ಭದ್ರಂ ಕರ್ಣೇಭಿಃ...' ಮುಂತಾದ ಶಾಂತಿಮಂತ್ರಗಳಲ್ಲೆಲ್ಲ ದೇವತೆಗಳನ್ನು, ಭಗವಂತನನ್ನು ಅಥವಾ ಆ ಪರಬ್ರಹ್ಮವನ್ನು ಲೌಕಿಕ ಮತ್ತು ಆಧ್ಯಾತ್ಮಿಕ ಉನ್ನತಿಗಾಗಿ ಪ್ರಾರ್ಥಿಸಲಾಗಿದೆ.

ಅದರಲ್ಲಿ ಜ್ಯೋತಿ ಬೆಳಗುವ ವಿಚಾರ ಬಂದಾಗ,

**ಓಂ ಅಸತೋ ಮಾ ಸದ್ಗಮಯ ।**
**ತಮಸೋ ಮಾ ಜ್ಯೋತಿರ್ಗಮಯ।**
**ಮೃತ್ಯೋರ್ಮಾಽಮೃತಂ ಗಮಯ ॥**

ಎಂಬ ಸಂಸ್ಕೃತ ಮಂತ್ರವನ್ನು ಪಠಿಸುವುದು ಸಾಮಾನ್ಯ. ಎಲ್ಲೆಡೆ ಇದರ ಅರ್ಥವನ್ನು ಕೇಳಿದಾಗ ಸಾಮಾನ್ಯವಾಗಿ ಹೇಳುವುದು, 'ಅಸತ್ಯದಿಂದ ಸತ್ಯದ ಕಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ, ಮೃತ್ಯುವಿನಿಂದ ಅಮೃತತ್ವದ ಕಡೆಗೆ ನಮ್ಮನ್ನು ನಡೆಸು' ಎಂಬ ಅರ್ಥವನ್ನು ಮಾತ್ರವೇ. ಆದರೆ ನಾವು ಆ ಮಂತ್ರವನ್ನು ಸ್ವಲ್ಪ ಆಳವಾಗಿ ಯೋಚಿಸಿದರೆ ಮತ್ತೊಂದು ಉತ್ತಮ ಅರ್ಥವು ಗೋಚರಿಸಬಹುದೇನೋ. ಆ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಶ್ಲೋಕದಲ್ಲಿ ಒಬ್ಬ ವ್ಯಕ್ತಿಯ ಸರ್ವಾಂಗೀಣ ಬೆಳವಣಿಗೆಗೆ, ಪರಿವರ್ತನೆಗೆ ಮಾಡಿರುವ ಪ್ರಾರ್ಥನೆಯು ಕಂಡುಬರುತ್ತದೆ. ಅದು ಹೇಗೆ ಎಂದು ನೋಡೋಣ.

ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳುವಂತೆ ಒಬ್ಬ ವ್ಯಕ್ತಿಯು, **ಆಶಿಷ್ಠಃ ದೃಢಿಷ್ಠಃ ಬಲಿಷ್ಠಃ** (ಉತ್ಸಾಹಿಯೂ, ದೃಢತೆಯುಳ್ಳವನೂ,

ಬಲಶಾಲಿಯೂ) ಆಗಿರಬೇಕು. ಅಂದರೆ, ಯಾರು ವಿದ್ಯಾವಂತನೋ, ಮನಸ್ಸನ್ನು ನಿಗ್ರಹಿಸಬಲ್ಲನೋ, ದೈಹಿಕವಾಗಿ ಶಕ್ತಿಶಾಲಿಯೋ ಅವನದು ನಿಜವಾದ ವ್ಯಕ್ತಿತ್ವ ಎನ್ನಬಹುದು. ಅಂದರೆ ನಮ್ಮ ವ್ಯಕ್ತಿತ್ವವು ಬಲಿಷ್ಠವಾಗಿದೆ ಎನ್ನಬೇಕಾದರೆ, ಅದು ದೈಹಿಕ, ಮಾನಸಿಕ, ನೈತಿಕ ಮತ್ತು ಆಧ್ಯಾತ್ಮಿಕವಾಗಿ ಸದೃಢವಾಗಿರಬೇಕು. ಆದರೆ ಅಸತ್ಯ, ತಮಸ್ಸು (ಅಂಧಕಾರ, ಅಜ್ಞಾನ ಅಥವಾ ಜಡತ್ವ) ಮತ್ತು ಮೃತ್ಯು ಇವು ನಮ್ಮ (ವ್ಯಕ್ತಿತ್ವದ) ಶತ್ರುಗಳಾಗಿ, ನಮ್ಮನ್ನು ಹಾಗೂ ನಮ್ಮ ವ್ಯಕ್ತಿತ್ವವನ್ನು ನಕಾರಾತ್ಮಕ ಭಾವನೆಗಳಿಂದ ತುಂಬುತ್ತವೆ; ನಮ್ಮ ಪ್ರಗತಿಯನ್ನು ತಡೆಯುತ್ತವೆ ಮತ್ತು ಬೆಳವಣಿಗೆಯನ್ನು ಕುಂಠಿತಗೊಳಿಸುತ್ತವೆ. ಈ ಶತ್ರುಗಳು ನಮ್ಮ ವ್ಯಕ್ತಿತ್ವದ ಸೂರ್ಯನಿಗೆ ಮೂರು ರೀತಿಯಲ್ಲಿ – ಅಂದರೆ ದೈಹಿಕ, ಮಾನಸಿಕ ಅಥವಾ ಬೌದ್ಧಿಕ ಮತ್ತು ಆಧ್ಯಾತ್ಮಿಕವಾಗಿ ಗ್ರಹಣವನ್ನುಂಟುಮಾಡುತ್ತವೆ.

**ಸತ್ ಮತ್ತು ಅಸತ್ :** ಸತ್ಯಾಸತ್ಯ ವಿವೇಚನೆ, ಒಳ್ಳೆಯದು ಮತ್ತು ಕೆಟ್ಟದ್ದು, ಸ್ವಾರ್ಥ–ನಿಸ್ವಾರ್ಥ ಎಂಬ ತಿಳಿವಳಿಕೆ–ವಿಚಾರಗಳು, ವ್ಯಕ್ತಿಯ ಬೌದ್ಧಿಕ ಶಕ್ತಿಯ ಪರಿಧಿಯಲ್ಲಿವೆ. ಇದು ಮಾನವನ ಬುದ್ಧಿಮತ್ತೆಗೆ ಸಂಬಂಧಿಸಿದ್ದಾಗಿದೆ. ಅಸತ್ಯವೆಂಬುದು ನಮ್ಮ ಬುದ್ಧಿಯನ್ನು ಆಕ್ರಮಿಸಿ, ಅಜ್ಞಾನವನ್ನುಂಟುಮಾಡುತ್ತದೆ. ಈ ಅಜ್ಞಾನವು ನಮ್ಮಲ್ಲಿ ಸ್ವಾರ್ಥಬುದ್ಧಿಯನ್ನು ಪ್ರೇರೇಪಿಸುತ್ತದೆ. ಸ್ವಾರ್ಥಪ್ರೇರಿತರಾದ ನಾವು ದುಷ್ಟಮಾರ್ಗದಿಂದ ನೈತಿಕತೆಯನ್ನು ಮೀರಿ ಬದುಕುತ್ತೇವೆ. ಸರಿಯಾದ ರೀತಿಯಲ್ಲಿ ಚಿಂತಿಸದೆ ಅಜ್ಞಾನ ಕವಿಯುವುದರಿಂದ, ಜೀವನದಲ್ಲಿ ಸತ್ಯ ಅಥವಾ ನಿತ್ಯದ ವಿಷಯದಲ್ಲಿ ಗೊಂದಲವುಂಟಾಗಿ, ಹಲವಾರು ತೊಂದರೆಗಳಿಗೆ ಸಿಲುಕಿಬಿಡುತ್ತೇವೆ. ಸತ್ಯಾಸತ್ಯತೆಯ, ನಿತ್ಯಾನಿತ್ಯದ ವಿಚಾರದಿಂದ ಅಥವಾ ಸರಿ ತಪ್ಪುಗಳ ವಿಶ್ಲೇಷಣೆ ಮಾಡುವುದರಿಂದ ಅಜ್ಞಾನವನ್ನು ಹೊರದೂಡಬಹುದು.

**ಜ್ಯೋತಿ ಮತ್ತು ತಮಸ್ಸು :**

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥** *(ಗೀತೆ, ೮.೧೪)*

ತಮಸ್ಸು ಎಂಬುದು ದೈಹಿಕ ರೋಗ. ನಾನು ದೇಹ ಎಂಬ ಭಾವನೆಗೆ ನೂಕುವ ಕತ್ತಲು, ಅಜ್ಞಾನ. ಇದು ಆಲಸ್ಯಕ್ಕೆ ಇಂಬು ಕೊಡುವ ಗುಣ. ಈ ಗುಣವು ಕಾರ್ಯಚಟುವಟಿಕೆಯಿಂದ ನಮ್ಮನ್ನು ದೂರವಿಡುತ್ತದೆ. ನಾವು ನಮ್ಮ ಗುರಿಯನ್ನು ತಲುಪಲು ಅಡ್ಡಗಾಲನ್ನು ಹಾಕುತ್ತದೆ. ಇದು ಮನಸ್ಸನ್ನೂ ಆಕ್ರಮಿಸುತ್ತದೆ ಎಂಬುದನ್ನು ನಾವು ಗಮನಿಸಬೇಕು. ಗುರಿಯ ಬಗ್ಗೆ ಸದಾ ಚಿಂತಿಸಿ ಕಾರ್ಯೋನ್ಮುಖರಾಗುವುದು, ನಿಸ್ವಾರ್ಥಸೇವೆಯಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ನಾವು ಈ ತಮೋಗುಣದಿಂದ ಪಾರಾಗಬಹುದು. 'ನಾನು ಆತ್ಮ ಅಥವಾ ಗುರಿಯೆಡೆಗೆ ಸಾಗುತ್ತಿರುವ ಸಾಧಕ' ಎಂಬ ಭಾವನೆಯಿಂದ ನಾವು ಜ್ಞಾನಜ್ಯೋತಿಯ ಬೆಳಕಿನ ಕಡೆಗೆ ನಡೆಯಬಹುದು.

**ಅಮೃತ ಮತ್ತು ಮೃತ್ಯು :** ಮಹಾಭಾರತದಲ್ಲಿ ಬರುವ ಕತೆಯೊಂದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಯಕ್ಷನೊಬ್ಬ ಧರ್ಮರಾಜನನ್ನು ಪ್ರಶ್ನಿಸುತ್ತಾನೆ, ''ಪ್ರಪಂಚದಲ್ಲಿ ಆಶ್ಚರ್ಯಕರವಾದುದು ಯಾವುದು?'' ಎಂದು. ಆಗ ಧರ್ಮರಾಜ, ''ಪ್ರತಿದಿನ ಜನರು ಸಾಯುವುದನ್ನು ಕಂಡೂ ಕೂಡ, ನಾವು ಸಾಯುವುದಿಲ್ಲ ಎಂದು ಇತರರು ಭಾವಿಸುತ್ತಾರೆ. ಇದೇ ಅತ್ಯಂತ ಆಶ್ಚರ್ಯಕರವಾದುದು'' ಎಂದು ಉತ್ತರಿಸುತ್ತಾನೆ. ಇಲ್ಲಿ **ಮೃತ್ಯೋರ್ಮಾ** ಎಂಬುದು, 'ನನಗೆ ಸಾವು ಎಂಬುದೊಂದು ಉಂಟು' ಎಂಬುದನ್ನು ನೆನಪಿಗೆ ತರುತ್ತದೆ. ಆದರೆ ತತ್ತ್ವತಃ **ನಾನು** ಎಂಬುದು ಈ ಮನಸ್ಸಲ್ಲ, ಬುದ್ಧಿಯಲ್ಲ, ಚಿತ್ತವಲ್ಲ, ಅಹಂಕಾರವಲ್ಲ, ದೇಹವಲ್ಲ; ಅದರ ಹಿಂದಿರುವ ಶಕ್ತಿ ಎಂಬ ಭಾವನೆಯೆಡೆಗೆ ಪರಿವರ್ತನೆಯಾಗಬೇಕಾಗಿದೆ. ನಾನು ಆತ್ಮ ಎಂಬುದನ್ನು ಅರಿಯಬೇಕಾಗಿದೆ. ಇಲ್ಲಿ ಮಾನವತ್ವದಿಂದ ದೈವತ್ವದೆಡೆಗೆ ನಮ್ಮ ಬೆಳವಣಿಗೆಯಾಗಬೇಕಾಗಿದೆ. ಇದು ಸಾಧ್ಯವಾಗುವುದು ಆಧ್ಯಾತ್ಮಿಕ ಸಾಧನಗಳಾದ ಧ್ಯಾನ ಮತ್ತು ಜಪಸಾಧನೆಗಳ ಮೂಲಕ ಮಾತ್ರವೇ.

ಈ ಮೂರು ಮಾರ್ಗಗಳೂ ಆಧ್ಯಾತ್ಮದ ನೆಲೆಗಟ್ಟಿನಲ್ಲಿ ಕೊನೆಯಾಗುತ್ತವೆ – **'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ.'** ಸತ್ಯ–ಜ್ಯೋತಿ–ಅಮೃತ ಇವು ಆಧ್ಯಾತ್ಮಿಕ ಜೀವನದ ಕೊನೆಯ ಹಂತಗಳು. ಅವು ಪರಬ್ರಹ್ಮದ ಲಕ್ಷಣಗಳೂ ಆಗಿವೆ.

ಈ ಪರಿವರ್ತನೆ ಅಥವಾ ಬೆಳವಣಿಗೆಯೆಂಬುದನ್ನು ನಾವು ಬಾಹ್ಯ (ಲೌಕಿಕ) ಮತ್ತು ಆಂತರಿಕ (ಅಧ್ಯಾತ್ಮಿಕ) ಎಂಬುದಾಗಿ ಎರಡು ರೀತಿಯಲ್ಲಿ ಕಾಣಬಹುದು.

**ಬಾಹ್ಯ ಅಥವಾ ಲೌಕಿಕವಾಗಿ ಪರಿವರ್ತನೆ:** ಅಸತ್–ತಮಸ್ಸು–ಮೃತ್ಯು – ಇವು ನಮ್ಮನ್ನು ಅಶಕ್ತರು ಅಥವಾ ಬಂಧನದಲ್ಲಿರುವವರು ಎಂದು ಸೂಚಿಸುವಂತಹ ಅಂಶಗಳು. ದೇಹ ನಿಯಮಿತವಾದ ಒಂದು ಶಕ್ತಿಯನ್ನು ಹೊಂದಿದೆ. ಅಸತ್ಯವಲ್ಲದ, ಅಂದರೆ ನಮ್ಮ ನೈಜಸ್ಥಿತಿಯಲ್ಲದ ತಮಸ್ಸು , ನಮ್ಮ ಸ್ವಾಭಾವಿಕ ಗುಣವಾದ ಸಾತ್ವಿಕತೆಯನ್ನು ಮುಚ್ಚಿ , ನಾವು ಮರಣ ಹೊಂದುವಂತಹವರು ಎಂಬ ಭಾವನೆಯನ್ನು ತರುವುದು.

ಇವು ಹಲವು ವಿಧದಲ್ಲಿ ನಮ್ಮನ್ನು, ನಮ್ಮ ಮನಸ್ಸು, ಬುದ್ಧಿಗಳನ್ನು ನಿಯಂತ್ರಿಸುತ್ತವೆ. ಯಾವುದೋ ಒಂದು ಅಗೋಚರ ಶಕ್ತಿ ನಮ್ಮನ್ನು, ನಮ್ಮ ಉದ್ದೇಶವನ್ನು ತನ್ನ ಅಂಕೆಯಲ್ಲಿಟ್ಟುಕೊಂಡಿದೆ ಎಂಬ ಮನೋಭಾವನೆ ನಮ್ಮಲ್ಲಿ ಬೆಳೆಯುತ್ತದೆ. ಆದರೂ ಅದನ್ನು ಮೀರಿ ಬೆಳೆಯುವ ಶಕ್ತಿ ನನ್ನಲ್ಲಿದೆ ಎಂಬ ನಂಬಿಕೆಯೊಂದು ಸದಾ ನಮ್ಮಲ್ಲಿರುತ್ತದೆ, ಅದು ಜೀವನೋದ್ದೇಶವನ್ನು ಸಾಧಿಸುವ ಛಲವನ್ನು ಬೆಳೆಸುತ್ತಿರುತ್ತದೆ.

ಸ್ವಾಮಿ ವಿವೇಕಾನಂದರು ಹೇಳುತ್ತಾರೆ, ''ಮಾನವನು ಕೆಳಹಂತದ ಸತ್ಯದಿಂದ ಉನ್ನತ ಸತ್ಯದೆಡೆಗೆ ಸಾಗುತ್ತಿದ್ದಾನೆ, ಅಸತ್ಯದಿಂದ

ಸತ್ಯದೆಡೆಗೆ ಅಲ್ಲ.'' ನಾನು ಅಶಕ್ತ ಎಂಬ ಭಾವನೆಯನ್ನು ತೊರೆದು, ನಾನು ಏನು ಬೇಕಾದರೂ ಸಾಧಿಸಬಲ್ಲೆ ಎಂಬ ಆತ್ಮವಿಶ್ವಾಸದೆಡೆಗೆ ಸಾಗಲು, ಯಶಸ್ಸನ್ನು ಸಾಧಿಸಲು ಈ ಹೇಳಿಕೆ ಸ್ಫೂರ್ತಿ ನೀಡುತ್ತದೆ.

ಭವಿಷ್ಯವನ್ನು ರೂಪಿಸುವ ಘಳಿಗೆ **ಈ ಕ್ಷಣ.** ಆ ಕ್ಷಣವು ಈ ದಿನದ ಒಂದಂಶ ಮಾತ್ರವೇ. ಆದರೆ ಈ ದಿನ ಮರೆಯಾಗುತ್ತಿದೆ. ದೃಢ ನಿರ್ಧಾರ ಮಾಡಿ, ಕಾರ್ಯಪ್ರವೃತ್ತನಾಗುವ ಕ್ಷಣದಲ್ಲಿ ತಮಸ್ಸಿನಿಂದಾಗಿ ಮಾಡಬೇಕೋ ಬೇಡವೋ ಎಂಬ ಅನುಮಾನ ವುಂಟಾಗಿ, ಸತ್ಯವನ್ನರಿಯುವ ಮನಸ್ಸು ಮುದುಡಿ ಹೋಗುತ್ತದೆ. ನಾಳೆ ಮಾಡೋಣ, ನಾಳೆ ನೋಡೋಣ ಎಂಬ ಮನಸ್ಸು ಉಂಟಾ ಗುತ್ತದೆ. ಆದರೆ ಈ 'ನಾಳೆ' ಎಂಬುದು ಇದೆಯೆ ಎಂದು ಚಿಂತಿಸಿದರೆ ಅದನ್ನು ಇಲ್ಲವೆಂದೇ ಹೇಳಬೇಕು. 'ನಾಳೆ ಬಾ' ಎಂಬ ಕತೆಯನ್ನು ನಾವೆಲ್ಲರೂ ಕೇಳಿದ್ದೇವೆ. ಈ ನಾಳೆ ಏನೆಂದು ನಮಗೆ ತಿಳಿಯ ದಾಗಿದೆ. ನಾಳೆ ಎಂಬುದು ಡ್ರಾ ಮಾಡದ, ದಿನಾಂಕವಿಲ್ಲದ ಚೆಕ್. ಇಂದು ಎಂಬುದು ಕೈಯಲ್ಲಿರುವ ಕ್ಯಾಶ್. **ಬೆಳಕು ಎಣ್ಣೆಯಲ್ಲಿ, ಎಣ್ಣೆ ಬೀಜದಲ್ಲಿರುವಂತೆ, ಮತ್ತು ಬೀಜ ಎಣ್ಣೆಯಲ್ಲಿರುವಂತೆ ಇಂದು ನಾಳೆಯಲ್ಲಿದೆ ಮತ್ತು ನಾಳೆ ಎಂಬುದು ಇಂದಿನ ದಿನದಲ್ಲಿದೆ – ಯಶಸ್ಸು 'ಈಗ' ಎಂಬ ಈ ಕ್ಷಣದ ಪ್ರಯತ್ನದಲ್ಲಿದೆ.**

ನಮ್ಮ ಭವಿಷ್ಯವು ಇಂದಿನ 'ಈ ಕ್ಷಣ' ದಲ್ಲಿದೆ. ಇಂದು ಎಂಬುದು ನಾಳೆಯದರ ಬೀಜದ ಸ್ಥಿತಿ. ಅದನ್ನು ಸರಿಯಾಗಿ ಉಪ ಯೋಗಿಸಿಕೊಂಡಾಗ ನಾಳೆಯೆಂಬುದು ನಮ್ಮ ಕೈಗೆ ಬರುತ್ತದೆ. ಪರಿ ಸ್ಥಿತಿಯೆಂಬುದು ನಮ್ಮ ಏಳ್ಗೆಗೆ ಸಹಾಯಕವಾಗಿಯೇ ಬರುತ್ತದೆ ಎಂದೇನೂ ಇಲ್ಲ. ಆದರೆ ಆ ಪರಿಸ್ಥಿತಿಯನ್ನು ನಮ್ಮ ಗುರಿ ಸಾಧನೆಗೆ ಉಪಯೋಗಿಸಿಕೊಳ್ಳುವುದರಲ್ಲಿ ನಮ್ಮ ಶ್ರೇಯಸ್ಸಿದೆ.

*ಒಂದು ಶ್ರೀಮಂತರ ಕುಟುಂಬ ಹಲವು ಕಾರಣಗಳಿಂದ ಬಡತನದ ಸ್ಥಿತಿಗೆ ಬಿತ್ತು. ಆ ಕುಟುಂಬದ ಬುದ್ಧಿವಂತ ಯುವಕನೊಬ್ಬ ಸಂಸಾರ ಸಾಗಿಸಲು ಕಷ್ಟವಾದ್ದರಿಂದ ಮತ್ತೊಬ್ಬ ಪರಿಚಯಸ್ಥನ ಬಳಿಗೆ ಸಾಲ ಕೇಳಲು ಹೋದ. ಆ ಶ್ರೀಮಂತನು ಯುವಕನಿಗೆ ತಿರಸ್ಕಾರದಿಂದ ಸತ್ತ ಇಲಿಯೊಂದನ್ನು ಕೊಟ್ಟು, 'ಬುದ್ಧಿವಂತ ಸತ್ತ ಇಲಿಯಿಂದಲೇ ಬದುಕಬಲ್ಲ. ಹೊರಟು ಹೋಗು' ಎಂದು ಕಳು ಹಿಸಿದ. ಆ ಸತ್ತ ಇಲಿಯನ್ನು ತೆಗೆದುಕೊಂಡು ಹೋದ ಯುವಕ ಕೆಲವೇ ತಿಂಗಳಲ್ಲಿ ವ್ಯಾಪಾರವನ್ನಾರಂಭಿಸಿ, ಊರಿನಲ್ಲಿ ಉತ್ತಮ ಹೆಸರನ್ನು ಪಡೆದ. ಅನಂತರ ಸತ್ತ ಇಲಿಯನ್ನು ನೀಡಿದ ವ್ಯಾಪಾರಿಗೆ ಚಿನ್ನದ ಇಲಿಯೊಂದನ್ನು ಉಡುಗೊರೆಯಾಗಿ ನೀಡಿದ. ಇದನ್ನು ಕಂಡ ಶ್ರೀಮಂತ, 'ಚಿನ್ನದ ಇಲಿಯನ್ನು ನನಗೇಕೆ ನೀಡು ತ್ತಿದ್ದೀಯಾ?' ಎಂದು ಕೇಳಿದಾಗ, ಆ ಯುವಕ ಹೇಳಿದ, 'ನನ್ನ ಈ ಶ್ರೀಮಂತಿಕೆಗೆ ನೀವೇ ಕಾರಣ. ನೀವು ಸತ್ತ ಇಲಿಯೊಂದನ್ನು ನನಗೆ ಕೊಟ್ಟು ಸ್ವಾಭಿಮಾನದ, ಛಲದ ಮತ್ತು ಶ್ರದ್ಧೆಯ ಪಾಠವನ್ನು ಕಲಿಸಿದಿರಿ. ನಾನು ಆ ಇಲಿಯನ್ನು ಹಾವಾಡಿಗನಿಗೆ ಕೊಟ್ಟೆ. ಅವನಿಂದ ಕೆಲವು ರೂಪಾಯಿ ಪಡೆದು, ಅದರಿಂದ ಕಡಲೆಯನ್ನು ತಂದೆ. ಅದನ್ನು ಹುರಿದು, ಜನ ಕೆಲಸ ಮಾಡುವಲ್ಲಿಗೆ ತೆಗೆದುಕೊಂಡು ಹೋದೆ. ಅದನ್ನು ನೀರಿನೊಂದಿಗೆ ಮಾರಿ ಸ್ವಲ್ಪ ಹಣ ಸಂಪಾದಿಸಿದೆ. ಇದೇ ರೀತಿ ನಿಧಾನವಾಗಿ ಕೆಲವೇ ತಿಂಗಳಲ್ಲಿ ಈ ಮಟ್ಟಕ್ಕೆ ಬೆಳೆದೆ' ಎಂದ. ಆತನ ಛಲ ಮತ್ತು ಶ್ರದ್ಧೆಯನ್ನು ಕಂಡ ಆ ಶ್ರೀಮಂತ ತನ್ನ ಮಗಳನ್ನು ಆ ಯುವಕನಿಗೆ ಮದುವೆ ಮಾಡಿಕೊಟ್ಟು, ತನ್ನ ಅಳಿಯ ನನ್ನಾಗಿ ಮಾಡಿಕೊಂಡ.*

ಈಗ ಕೈಯಲ್ಲಿರುವ ಇಂದಿನ ದಿನವನ್ನೇ ನಾವು ಉಪಯೋಗಿಸಿ ಕೊಳ್ಳಲು ಸಮರ್ಥರಾಗಿಲ್ಲದಿದ್ದಲ್ಲಿ, **ನಾಳೆ ಎಲ್ಲಿಯದು?** ಮತ್ತೆ ಆ ನಾಳೆ ಎಂಬುದು ಇಂದಾಗದಿದ್ದಲ್ಲಿ, ನಾಳೆ ಎಲ್ಲಿಯದು?

ಗುರಿ ಸಾಧನೆ ಎಂಬುದು ನಾನು ಇಂದು ಏನಾಗಿದ್ದೇನೋ ಅದಕ್ಕಿಂತ ಉತ್ತಮ ಅಥವಾ ಉನ್ನತ ಸ್ಥಾನಕ್ಕೇರಬೇಕೆಂಬ ಭಾವನೆಯ ಸಾಧ್ಯತೆಯೇ ಆಗಿದೆ. ಅದಕ್ಕೆ ಗುರಿಯನ್ನು ಅಥವಾ ಹಂತವನ್ನು ಇಂದು ನಿರ್ಧರಿಸಿ, ಈಗಲೇ ಪ್ರಯತ್ನಿಸಬೇಕಾಗಿದೆ. ಇಂದು ನಾನು ಸಾಮಾನ್ಯನು; ಆದರೆ ನನ್ನ ಭವಿಷ್ಯದಲ್ಲಿ ಗುರಿ ಸಾಧಿಸಿ ಅಸಾಮಾನ್ಯ ನಾಗಬೇಕಾದರೆ ಈ ಮೂರು ಮುಖಗಳ – **ಅಸತ್, ತಮಸ್ಸು, ಮೃತ್ಯು** – ಈ ಮುಖಗಳ ಸರಿಯಾದ ತಿಳುವಳಿಕೆಯಿರಬೇಕು, ಇವುಗಳ ನಿವಾರಣೆಗೆ ಇರುವ ಅಸಡ್ಡೆ ಮತ್ತು ಭಯವನ್ನು ತ್ಯಜಿಸ ಬೇಕು. ಮಾನವನು ದೇವನಾಗುವ ಕಡೆಗೆ ಮುಂದುವರೆಯಬೇಕು.

ಹಾದಿಯಲ್ಲಿನ ಸೋಲು–ಗೆಲುವುಗಳ ಮತ್ತು ಅಭದ್ರತೆಯ, ಅನಿಶ್ಚಿತತೆಯ ನಕಾರಾತ್ಮಕ ಭಾವನೆಯನ್ನು ತೊಡೆದು ಹಾಕಬೇಕಾ ಗಿದೆ. ಅದಕ್ಕೆ ಸಕಾರಾತ್ಮಕ ಚಿಂತನೆಯನ್ನು ಬೆಳೆಸಬೇಕು.

ನಾವು ಈ ಹಿಂದೆ ನೋಡಿದ **ಅಸತ್–ತಮಸ್ಸು–ಮೃತ್ಯು** ಇವುಗಳಿಗೆ ತದ್ವಿರುದ್ಧವಾದ ಗುಣಾತ್ಮಕ, ಧೈರ್ಯ ಮತ್ತು ಆಶಾ ಭಾವವನ್ನು ನೀಡುವವು **ಸತ್–ಜ್ಯೋತಿ–ಅಮೃತ**ವೆಂಬ ಚಿಂತನೆ. ಇವೇ ನಮ್ಮಲ್ಲಿ 'ನಾವು ಶಕ್ತಿಶಾಲಿಗಳು ಮತ್ತು ಸರ್ವತಂತ್ರ ಸ್ವತಂತ್ರರು' ಎಂಬ ಭಾವನೆಯನ್ನು ತರುತ್ತದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನ 'ತನಗೆ ತಾನೇ ಸಹಾಯ ಮಾಡಿಕೊಳ್ಳಬೇಕು' ಎಂದು ಮಾತು ಮತ್ತು ಸ್ವಾಮಿ ವಿವೇಕಾನಂದರ, 'ನಿನ್ನ ಏಳ್ಗೆಗೆ ನೀನೇ ಶಿಲ್ಪಿ' ಎನ್ನುವ ನುಡಿ ಪ್ರತಿಯೊಬ್ಬರಿಗೂ ಸ್ಥೈರ್ಯವನ್ನು ನೀಡುವಂಥವು.

ಸಾತ್ವಿಕ ಗುಣ ನಮ್ಮ ನೈಜ ಸ್ಥಿತಿ. **ಸತ್–ಜ್ಯೋತಿ–ಅಮೃತ**ಗಳು ನಮ್ಮ ಪ್ರತಿಯೊಂದು ನಿರ್ಧಾರ ಮತ್ತು ಕಾರ್ಯಕ್ಕೆ ಶಕ್ತಿಯನ್ನು ನೀಡುವಂತಹವು. ಸರಿಯಾದ ಸಮಯದಲ್ಲಿ, ಸರಿಯಾದ ನಿರ್ಧಾರ ತೆಗೆದುಕೊಳ್ಳಲು, ಮತ್ತು ಮುಂದುವರಿಯಲು ಇವು ಪ್ರೋತ್ಸಾಹ ನೀಡುತ್ತವೆ. ಅವು ನಮ್ಮ ಜೀವನವನ್ನು ಉತ್ತಮ ಸ್ಥಿತಿಗೆ, ಪರಿವರ್ತನೆ ಮತ್ತು ಬೆಳವಣಿಗೆಯ ಕಡೆಗೆ ಕರೆದೊಯ್ಯುತ್ತವೆ. ಇದಕ್ಕೆ ಶ್ರದ್ಧಾ ಪೂರ್ವಕ ಪ್ರಯತ್ನ ಅಗತ್ಯ . ಬುದ್ಧಿವಂತ ಎಲ್ಲೆಲ್ಲೂ, ಯಾವಾಗಲೂ ಸಕಾರಾತ್ಮಕ ಅವಕಾಶಗಳನ್ನೇ ನೋಡುತ್ತಿರುತ್ತಾನೆ, ಅವನ ಕಣ್ಣಿಗೆ

ಅವೇ ಕಾಣಿಸುತ್ತವೆ. ಸಚಿನ್ ತೆಂಡುಲ್ಕರ್ ಒಮ್ಮೆ ಹೇಳಿದಂತೆ, 'ನನಗೆ ಯಾವಾಗಲೂ ಫೀಲ್ಡರ್‌ಗಳ ನಡುವೆ ಖಾಲಿ ಸ್ಥಳವೇ ಕಾಣುತ್ತಿರುತ್ತದೆ.' ಅಂದರೆ ನಾವು ಹೇಗೆ ನೋಡುತ್ತೇವೋ ಹಾಗೆ ಜಗತ್ತು ತನ್ನನ್ನು ತೋರಿಸಿಕೊಳ್ಳುತ್ತದೆ. ಆಶಾವಾದಿಗೆ ಸದಾ ಜಯವಿರುತ್ತದೆ.

ನಮ್ಮ ಅಶಕ್ತತೆಯೇ ನಮ್ಮ ಶಕ್ತಿಯಾಗಿ ಪರಿವರ್ತನೆಯಾಗಬೇಕಾಗಿದೆ. ಆಗ ಮಾತ್ರವೇ ನಮ್ಮ ಪರಿವರ್ತನೆ ಮತ್ತು ಬೆಳವಣಿಗೆ ಸಾಧ್ಯ. ಚೀನಾದ ಒಬ್ಬ ಬಾಲಕ ಆಕಸ್ಮಿಕ ಘಟನೆಯೊಂದರಲ್ಲಿ ತನ್ನ ಬಲಗೈಯನ್ನು ಕಳೆದುಕೊಂಡ. ತಾನು ಕುಂಗ್-ಫು ವಿದ್ಯೆಯನ್ನು ಕಲಿಯಬೇಕೆಂಬ ಆತನ ಇಚ್ಛೆಗೆ ಇದು ಮಾರಕವಾಯಿತು. ಆದರೂ ಗುರುವೊಬ್ಬರನ್ನು ಕಂಡು ಅವರ ಮುಂದೆ ತನ್ನ ಬೇಡಿಕೆಯನ್ನಿಟ್ಟ. ಅವರೂ ಆತನ ಪರಿಸ್ಥಿತಿಯನ್ನು ಕಂಡು ಮರುಗಿ, ಕುಂಗ್-ಫು ಕಲಿಸಲು ಮುಂದಾದರು. ಆದರೆ ಆತನಿಗೆ ಕೇವಲ ಒಂದೇ ಒಂದು ರೀತಿಯ ಖಾತಾವನ್ನು (ಒಂದು ರೀತಿಯ ಪಟ್ಟು) ಹೇಳಿಕೊಡುತ್ತಿದ್ದರು. ಇದರಿಂದ ಬೇಸರಗೊಂಡ ಹುಡುಗ ಅವರಲ್ಲಿ ಕೇಳಿಕೊಂಡರೂ ಅವರು, ''ಇದೊಂದನ್ನು ನೀನು ಅಭ್ಯಾಸ ಮಾಡು, ಅಷ್ಟೇ ಸಾಕು'' ಎಂದರು. ಒಂದು ದಿನ ರಾಷ್ಟ್ರೀಯ ಮಟ್ಟದ ಚಾಂಪಿಯನ್ ಸ್ಪರ್ಧೆಯಲ್ಲಿ ಭಾಗವಹಿಸಲು ಆತನಿಗೆ ಹೇಳಿದರು. ಆತ ಭಾಗವಹಿಸಿದಾಗ, ಪ್ರತಿಯೊಬ್ಬರೂ ಆತನನ್ನು ಕಂಡು ನಕ್ಕರು. ಹುಡುಗ ಕೆಳಹಂತದ ಒಂದೊಂದೇ ಸ್ಪರ್ಧೆಯನ್ನು ಗೆಲ್ಲುತ್ತಾ ಬಂದಾಗ ಹಲವರು ಮೂಗಿನ ಮೇಲೆ ಬೆರಳಿಟ್ಟರು. ಕೊನೆಯ ಹಂತದ ಹೋರಾಟದಲ್ಲಿ ಶಕ್ತಿಶಾಲಿ ಎದುರಾಳಿಯನ್ನು ಎದುರಿಸಲು ಕಷ್ಟವೆನಿಸಿತು. ಆಗ ಆ ಬಾಲಕ ತಾನು ಕಲಿತ ಒಂದೇ ಒಂದು ಖಾತವನ್ನು ಆ ಬಲಶಾಲಿಯ ಮೇಲೆ ಪ್ರಯೋಗಿಸಿದ. ಅದರಿಂದ ತಪ್ಪಿಸಿಕೊಳ್ಳಲಾಗದ ಎದುರಾಳಿ ಸೋತುಹೋದ. ಈ ಬಾಲಕ ರಾಷ್ಟ್ರೀಯ ಮಟ್ಟದ ಚಾಂಪಿಯನ್ ಆಗಿ ಪ್ರಶಸ್ತಿ ಪಡೆದ. ನಂತರ ಗುರುವಿನಲ್ಲಿ ತನಗೆ ಆ ಒಂದೇ ಒಂದು ಖಾತವನ್ನು ಮಾತ್ರ ಕಲಿಸಿದ್ದಕ್ಕೆ ಕಾರಣ ಕೇಳಿದ. ಆಗ ಆ ಗುರು, ''ಆ ಖಾತದ ಚಾಲನೆಯಲ್ಲಿ ಎದುರಾಳಿಯನ್ನು ನೀನು ಹಿಡಿದಾಗ, ಆತ ನಿನ್ನಿಂದ ತಪ್ಪಿಸಿಕೊಳ್ಳಲು ನಿನ್ನ ಬಲಗೈಯನ್ನು ಹಿಡಿದು ತಿರುಗಿಸಬೇಕು. ಹಾಗಾದರೆ ಮಾತ್ರ ನಿನ್ನಿಂದ ಪಾರಾಗಬಹುದು. ಆದರೆ ನಿನಗೆ ಬಲಗೈಯಿಲ್ಲ. ನಿನ್ನ ಕೊರತೆಯೇ ನಿನಗೆ ಶಕ್ತಿಯಾಗಿ ಪರಿಣಮಿಸಿತು'' ಎಂದರು.

ಇದು ನಮ್ಮ ಜೀವನದ ಒಂದು ಪಾಠವಾಗಬೇಕು. ನಮ್ಮಲ್ಲಿರುವ ನ್ಯೂನತೆಯನ್ನೇ ಮೆಟ್ಟಿಲಾಗಿ ಮಾಡಿಕೊಂಡು ಅದರೊಂದಿಗೆ ಮುಂದುವರಿಯಬೇಕು, ಗುರಿ ಮುಟ್ಟಬೇಕು. ಹೀಗೆ ಈ **ಸತ್, ಜ್ಯೋತಿ** ಮತ್ತು **ಅಮೃತ** ಇವು, ನಮಗೆ ದೊರೆತ ಅವಕಾಶವನ್ನು ಉಪಯೋಗಿಸಿಕೊಳ್ಳುವ ಬುದ್ಧಿಯನ್ನು, ಧೈರ್ಯವನ್ನು, ಯಶಸ್ಸನ್ನು ನೀಡುತ್ತವೆ. ಇದೇ ನಮ್ಮ ಗುರಿಸಾಧನೆಗೆ, ಪರಿವರ್ತನೆಗೆ ನಾಂದಿಯಾಗುತ್ತವೆ. ತನ್ನಲ್ಲಿ ತಾನು ನಂಬಿಕೆಯನ್ನಿಟ್ಟು, ತನ್ನ ಬುದ್ಧಿವಂತಿಕೆಯಿಂದ ಗುರಿಯೆಡೆಗೆ ಸಾಗುವುದೇ ಲೌಕಿಕವಾಗಿ ಮೇಲೆ ಹೇಳಿದ ಪ್ರಾರ್ಥನೆಯನ್ನು ಮಾಡುವುದರ ಅರ್ಥ.

**ಆಧ್ಯಾತ್ಮಿಕ ಅಥವಾ ಆಂತರಿಕ ಪರಿವರ್ತನೆ :** ಸ್ವಾಮಿ ವಿವೇಕಾನಂದರು, 'ಪ್ರತಿಯೊಂದು ಜೀವಿಯೂ ಆ ಪರಮಾತ್ಮನ ಸ್ವರೂಪವೇ ಆಗಿದೆ' ಎಂದಿದ್ದಾರೆ. ಭಗವದ್ಗೀತೆಯಲ್ಲಿ ಕೂಡ ಭಗವಂತನು, 'ಎಲ್ಲ ಜೀವಿಗಳ ಹೃದಯದಲ್ಲೂ ನಾನು ವಾಸವಾಗಿದ್ದೇನೆ' ಎಂದು ಸಾರುತ್ತಾನೆ.

ತಮಸ್ಸು ಎಂಬ ಅಂಧಕಾರವು ನಾವು ಯಾರು, ಎಲ್ಲಿಂದ ಬಂದಿದ್ದೇವೆ, ನಮ್ಮ ಗುರಿ ಏನು ಎಂಬುದನ್ನು ಹಾಗೂ ನಮ್ಮಲ್ಲಿರುವ ದೈವತ್ವವನ್ನು ಮರೆಯುವಂತೆ ಮಾಡುತ್ತದೆ. ನಮ್ಮ ನೈಜ ಸ್ಥಿತಿಯ ಬಗ್ಗೆ ಅಜ್ಞಾನವನ್ನು ಅದು ತುಂಬುತ್ತದೆ. ನಾವು ದೇಹವೆಂಬ ಭಾವನೆ ನಮ್ಮ ಬಾಲ್ಯದಿಂದಲೇ ಆರಂಭವಾಗುತ್ತದೆ. ಇದನ್ನು ಬಿಟ್ಟು ಬಿಡುತ್ತೇವೆ ಎಂಬುದು ಮಹಾಭಯವೇ. ಜೀವನದ ದೊಡ್ಡ ಭಯವೇ ಸಾವು. ಪಾಶ್ಚಾತ್ಯರಲ್ಲಿ 'He lost his soul'ಎಂದು ಹೇಳಿದರೆ, ನಾವು ಭಾರತೀಯರು 'He left his body' ಎಂದು ಹೇಳುತ್ತೇವೆ. ಈ ಸಾವು ಎಂಬುದು ಕೇವಲ ಒಂದು ಬಟ್ಟೆಯನ್ನು ಬದಲಿಸಿದಂತೆ, ನಾವು ಸಾಯಲಾರೆವು ಎಂದು ನಮಗೆ ತಿಳಿದಿದೆ. ನಿಜವಾದ 'ನಾನು' ಈ ದೇಹವಲ್ಲ ಎಂಬುದು ಪರಮ ಸತ್ಯ. ಇದನ್ನು ತಮಸ್ಸು, ಅಜ್ಞಾನ ನಮ್ಮಿಂದ ಮರೆಮಾಚುತ್ತದೆ. ಸತ್ಯವು ಈ ಅಜ್ಞಾನವನ್ನು ಜ್ಞಾನವನ್ನಾಗಿ ಪರಿವರ್ತಿಸುವುದು. ಜ್ಯೋತಿ ಎಂಬುದು ಜ್ಞಾನ. ಈ ಜ್ಞಾನದಿಂದ ಅಮೃತತ್ವ, ಅಮರತ್ವ ಪ್ರಾಪ್ತಿಯಾಗುವುದು. ನಾವು ನಶ್ವರವಾದ ದೇಹವಲ್ಲ ಎಂಬ ಸಾಮಾನ್ಯ ಜ್ಞಾನವೇ ಎಷ್ಟೊಂದು ಆನಂದವನ್ನು ನೀಡುತ್ತದೆ! ಅಂತಹದ್ದರಲ್ಲಿ ಅದರ ಅನುಭವ ಮತ್ತೆಂತಹ ಆನಂದವನ್ನು ನೀಡದಿರದು?

ಈ ಪ್ರಾರ್ಥನೆಯ ಭಾವ : ಒಳ್ಳೆಯದರಿಂದ ಉತ್ತಮದೆಡೆಗೆ, ಉತ್ತಮದಿಂದ ಉನ್ನತಿಯಡೆಗೆ ತನ್ನನ್ನು ತಾನು ಪರಿವರ್ತಿಸಿಕೊಳ್ಳಲು ಭಗವಂತನು ನಮಗೆ ಸಹಾಯಕನಾಗಲಿ ಎಂದಾಗಿದೆ. ಈ ಪರಿವರ್ತನೆಯೇ ಎಲ್ಲ ಧರ್ಮಗಳ ತಿರುಳು ಹಾಗೂ ಅವು ಸಾರುತ್ತಿರುವ ಸತ್ಯವಾಗಿದೆ. ✷

> ಒಂದು ರಾತ್ರಿ ಅನೇಕ ಮಂದಿ ಕುಡುಕರಿಗೆ ಒಂದು ದೋಣಿಯ ಪ್ರಯಾಣ ಮಾಡಬೇಕೆಂದು ಇಚ್ಛೆಯಾಯಿತು. ಅವರು ನದಿಗೆ ಹೋಗಿ ದೋಣಿಯಲ್ಲಿ ಕುಳಿತು ಹುಟ್ಟು ಹಾಕಲಾರಂಭಿಸಿದರು. ಬೆಳಗಾದಾಗ ಅವರಿಗೆ ತಾವು ಯಾವ ಸ್ಥಳದಿಂದ ಹೊರಟಿದ್ದರೋ, ಅದೇ ಸ್ಥಳದಲ್ಲಿ ಇದ್ದೇವೆಂದು ಗೊತ್ತಾಯಿತು. ಅವರು ಎಷ್ಟೊಂದು ಮೈಮರೆತಿದ್ದರೆಂದರೆ, ದೋಣಿಯ ಕಟ್ಟನ್ನು ಬಿಚ್ಚುವುದಕ್ಕೆ ಕೂಡ ಅವರಿಗೆ ಪರಿಜ್ಞಾನವಿರಲಿಲ್ಲ! ಅದೇ ರೀತಿ, ಆಸೆಗಳನ್ನು ಬಿಡದೆ ಮಾಡುವ ಸಾಧನೆಯೆಲ್ಲವೂ ವ್ಯರ್ಥ.
>
> **- ನಾಗ ಮಹಾಶಯ** *(ದುರ್ಗಾಚರಣ ನಾಗ್, ಶ್ರೀರಾಮಕೃಷ್ಣರ ಶಿಷ್ಯರು)*



# ಆಧ್ಯಾತ್ಮಿಕ ಸಂಭಾಷಣೆ



## ಸ್ವಾಮಿ ಭೂತೇಶಾನಂದಜೀಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ

**ಪ್ರಶ್ನೆ:** ಮಹಾರಾಜರೆ, ಈ ಸಂಘದಲ್ಲಿದ್ದು ನಾವು ಏನು ಮಾಡುತ್ತಿದ್ದೇವೋ ಅದು ಹಿಂದಿನಿಂದ ಪಾಲಿಸಿಕೊಂಡು ಬಂದಿದ್ದು.

**ಮಹಾರಾಜ್:** ಸಂಘವನ್ನು ಬಿಟ್ಟು ನಮಗೆ ಬೇರೆ ದಾರಿಯಿಲ್ಲವೆಂದು ನಾವು ಸಂಘದಲ್ಲಿದ್ದೇವೆ. ಸಂಘದಿಂದ ನಮಗೆ ಅನುಕೂಲವಿದೆಯೆಂದೂ ನಾವು ಸಂಘದಲ್ಲಿದ್ದೇವೆ. ನಮಗೆ ಪ್ರತಿಕೂಲವಾಗುತ್ತಿದ್ದರೆ ನಾವು ಸಂಘದಲ್ಲಿ ಇರುತ್ತಿರಲಿಲ್ಲ.

**ಪ್ರಶ್ನೆ:** ಆದರೂ, ಇಲ್ಲಿ ವಾಸಿಸುವುದಂತೂ ಹಿಂದಿನಂತೆಯೇ ನಡೆದುಕೊಂಡು ಬರುತ್ತಿದೆ.

**ಮಹಾರಾಜ್:** ಹೌದು, ಅದು ಸರಿ. ಧ್ಯಾನ, ಜಪ ಮಾಡುವುದು ಕೂಡ ಪರಂಪರಾಗತವಾಗಿ ಬರುತ್ತಿವೆ. ಪರಂಪರೆಯನ್ನು ಬಿಟ್ಟು ಬೇರೆ ಮಾರ್ಗವೇನಿದೆ? ಮನಸ್ಸಿನೊಳಗೆ ತೀವ್ರ ವೈರಾಗ್ಯ ಎಲ್ಲಿಯವರೆಗೆ ಬರದೋ ಅಲ್ಲಿಯ ತನಕ ಸಂಪ್ರದಾಯಬದ್ಧವಾಗಿ ಇರಲೇಬೇಕು. ತೀವ್ರ ವೈರಾಗ್ಯ ಬಂದಾಗಲೇ ನಾವು ಮುಂದುವರೆಯುತ್ತೇವೆ. ಅಲ್ಲಿತನಕ, 'ಬನತ ಬನತ ಬನಿಜಾಯಿ.' (ಪ್ರಯತ್ನ ಮಾಡುತ್ತಾ ಮಾಡುತ್ತಾ ಪ್ರವೀಣರಾಗುವುದು)

**ಪ್ರಶ್ನೆ:** ನಮ್ಮಲ್ಲಿ ಒಂದು ಮಾತಿದೆ, ಈ ಸಂಘವನ್ನು ಶ್ರೀರಾಮಕೃಷ್ಣರು, ಶ್ರೀಮಾತೆ, ಸ್ವಾಮೀಜಿ ಮತ್ತು ಶ್ರೀರಾಮಕೃಷ್ಣರ ಇತರ ಶಿಷ್ಯರು ಆರಂಭಿಸಿದರು. ಅವರ ಒಂದು ಭಾವಧಾರೆ ಈಗಲೂ ನಡೆದುಕೊಂಡು ಬರುತ್ತಿದೆ. ಪ್ರಯತ್ನಪಟ್ಟೋ, ಪಡದೆಯೋ ಈ ಭಾವಧಾರೆಗೆ ನಾನು ಬಂದುಬಿಟ್ಟಿದ್ದೇನೆ. ಆದ್ದರಿಂದ ಈ ಭಾವಧಾರೆಯೇ ನನ್ನನ್ನು ಎಳೆದುಕೊಂಡು ಹೋಗುತ್ತಿದೆ; ಇದೊಂದು ವಿಚಾರ. ಈ ವಿಚಾರವಾಗಿ ನಾವು 'ಬ್ರಹ್ಮಚಾರಿಗಳ ಪ್ರಶಿಕ್ಷಣ ಕೇಂದ್ರ'ದಲ್ಲಿ ಸಾಕಷ್ಟು ಚರ್ಚೆ ಮಾಡಿದ್ದೇವೆ. ಇನ್ನೊಂದು, ಧರ್ಮಜೀವನ; ಅದು ವೈಯಕ್ತಿಕ ಪ್ರಯತ್ನ. ಈ organaisationನಲ್ಲಿ ನಾನು ಎಲ್ಲರೊಂದಿಗೆ ಬದುಕುತ್ತಿದ್ದೇನೆಂಬ ಮಾತ್ರಕ್ಕೆ ನನ್ನ ಆಧ್ಯಾತ್ಮಿಕ ಉನ್ನತಿಯಾಗುವುದು ಎನ್ನುವಂತಿಲ್ಲ. ಈ ನಡುವೆ ನಾನೇನಾದರೂ ಪ್ರಯತ್ನಪಟ್ಟರೆ individual progress ಆದರೂ ಆದೀತು. ಆದ ಕಾರಣ ಸಂಘದಲ್ಲಿದ್ದರೂ ವೈಯಕ್ತಿಕ ಉನ್ನತಿ individual ಪ್ರಯತ್ನವನ್ನು ಅವಲಂಬಿಸಿದೆ.

**ಮಹಾರಾಜ್:** ಇದನ್ನು ಸ್ವಲ್ಪ ವಿಚಾರಮಾಡಿ ನೋಡಬೇಕು. ಈ ಸಂಘ ನಮ್ಮದು; ಇದಕ್ಕೆ ನಮ್ಮಿಂದ ಏನಾದರೂ ಸಹಾಯ ಆಗಬೇಕು. ಬದಲಾಗಿ, ತಿಂದುಂಡು ಬಿದ್ದುಕೊಂಡಿರುವುದು ಅಥವಾ ಒಂದೆರಡು ಹೂವಿನ ಗಿಡ ಬೆಳೆಸುವುದು, ಏನೋ ಒಂದು ಕೆಲಸ ಮಾಡುವುದು ಇದರಿಂದ ಏನೂ ಆಗದು.

**ಪ್ರಶ್ನೆ:** ಹಾಗಲ್ಲ, ಇವರ ಪ್ರಶ್ನೆ, as a whole ಸಂಘದಲ್ಲಿ ಸಾಧನೆ-ಭಜನೆ ಮಾಡಲು ಇನ್ನಷ್ಟು ಅನುಕೂಲತೆಯಿರಬೇಕಿತ್ತು; ಯಾವಾಗಲೂ ಸಂಘ ನನ್ನ ಉಪಯೋಗಕ್ಕೆ ಅನುಗುಣವಾಗಿಲ್ಲ. ಆದರೂ ಇದ್ದ ಅನುಕೂಲತೆಯಲ್ಲೇ ನಾನು ಸಾಧನೆಗೆ ಪ್ರಯತ್ನಿಸಬೇಕು ಎಂದು.

**ಮಹಾರಾಜ್:** ಹೌದು, ಎಷ್ಟು ಸಾಧ್ಯವೋ ಅಷ್ಟು ಪ್ರಯತ್ನಿಸಬೇಕು.

**ಪ್ರಶ್ನೆ:** ಮಹಾಪುರುಷ ಮಹಾರಾಜರು ಹೇಳಿದ್ದನ್ನು, ತಾವು ಒಂದು ಸಲ ಉದಾಹರಿಸಿದ್ದಿರಿ – 'ನಾನು ಇಚ್ಛೆಪಟ್ಟರೆ ಈ ಕ್ಷಣವೇ ಈ ಮಾವಿನ ಮರಕ್ಕೂ ಮುಕ್ತಿ ಕೊಡಬಲ್ಲೆ' ಎಂದು.

**ಮಹಾರಾಜ್:** ಇದು ಅವರ ಸ್ವಂತದ, ವೈಯಕ್ತಿಕ ವಿಚಾರ; ಇದನ್ನು ಹಿಡಿದುಕೊಂಡು ನಾವು ವಿಚಾರ ಮಾಡಬಾರದು.

**ಪ್ರಶ್ನೆ:** ಪುನಃ ಅವರೇ ಹೇಳುತ್ತಾರೆ, 'ಈ ಸಂಘದಲ್ಲಿ ನಾಯಿಯ ಹಾಗೆ ಬಿದ್ದುಕೊಂಡಿರಬೇಕು.' ನಾಯಿಯ ಹಾಗೆ ಎಂದರೆ ...

**ಮಹಾರಾಜ್:** ನಾಯಿಯ ಹಾಗೆ ಎಂದರೆ, ಈ ಸಂಘದ ಮೇಲೆ ಅಷ್ಟೊಂದು ವಿಶ್ವಾಸ ಹೊಂದಿರಬೇಕೆಂದರ್ಥ. ಬಾಯ್ಮುಚ್ಚಿಕೊಂಡು ಸುಮ್ಮನೆ ಬಿದ್ದುಕೊಂಡಿರುವುದಲ್ಲ.

**ಪ್ರಶ್ನೆ:** ಹಾಗಲ್ಲ, ಈ ಭಾವಧಾರೆ ನನ್ನನ್ನು ಎಳೆದುಕೊಂಡು ಹೋಗುತ್ತದೆ. ಹಾಗೆಂದು ಅವರು ಹೇಳುತ್ತಿದ್ದಾರೆ.

**ಮಹಾರಾಜ್:** ಇದರಲ್ಲಿ ವಿಶ್ವಾಸ ಕಳೆದುಕೊಳ್ಳಬಾರದು. ಸಂಘವೆಂದರೆ ಶ್ರೀರಾಮಕೃಷ್ಣರು; ಶ್ರೀರಾಮಕೃಷ್ಣರೆಂದರೆ ಸಂಘ. ಅವರನ್ನು ನಾವು ನಮ್ಮವರೆಂದು ಸ್ವೀಕರಿಸುತ್ತೇವೆ, ಆದರೆ ಕೆಲಸ ಕಾರ್ಯಗಳನ್ನು ಮಾಡುವಾಗ ನಮ್ಮವರೆಂದು ತಿಳಿದುಕೊಳ್ಳುವುದಿಲ್ಲ. ಎರಡು ಹೊತ್ತು ಅವರ ನಾಮ, ಜಪ ಮಾಡುವುದು ಅನಂತರ ಊಟ-ತಿಂಡಿ ಮಾಡಿಕೊಂಡು ಸುಮ್ಮನಿರುವುದು; ಸ್ವಾಮೀಜಿ ಈ ರೀತಿ ಹೇಳಿಲ್ಲ. ಒಂದು ಸಲ ಸ್ವಾಮೀಜಿ ಹೇಳುತ್ತಾರೆ, ''ಭಗವಂತನನ್ನು ನಿರಂತರ ಪ್ರಾರ್ಥಿಸಬೇಕು.'' ಶ್ರೀರಾಮಕೃಷ್ಣರು ಸ್ವಾಮೀಜಿಗೆ ಹೇಳುತ್ತಾರೆ, ''ಹಾಗೆ ಹೇಳಬೇಡ, 'ದಿನಕ್ಕೆರಡು ಸಲ ಪ್ರಾರ್ಥಿಸು' ಎನ್ನು.'' ಹೀಗೆ, ಸಂಘ ಎಂದರೆ ಎಲ್ಲವೂ ಸಂಘವೆ. ಎಲ್ಲರಲ್ಲೂ ತ್ಯಾಗವಿದೆ. ಕೆಲವರದು ತೀವ್ರ, ಇನ್ನು ಕೆಲವರದು ಮಧ್ಯಮ, ಹೀಗೆ ತ್ಯಾಗ ವಿವಿಧ ಬಗೆಯಲ್ಲಿದೆ. ಆದರೆ ಸಂಘ ಎಲ್ಲರನ್ನೂ ಸಹೋದರತೆಯಲ್ಲಿ ಬಂಧಿಸಿಬಿಟ್ಟಿದೆ. ಇದರಲ್ಲಿ ಉತ್ತಮಗತಿ, ಮಧ್ಯಮಗತಿ, ಮಂದಗತಿಯವರು ಎಲ್ಲರೂ ಇದ್ದಾರೆ. ಸಂಘ ಎಲ್ಲರಿಗೂ ಸಹಾಯ ಮಾಡುತ್ತದೆ. ಸಂಘ ಒಂದು ಅಗರಬತ್ತಿಯಂತೆ; ನಾವೆಲ್ಲರೂ ನಮ್ಮ ಅಹಂಕಾರವನ್ನು ಸಂಘದ ಪದತಲದಲ್ಲಿ ಅರ್ಪಿಸಬೇಕು. ನೀನು ಯಾವಾಗ ಬ್ರಹ್ಮಜ್ಞಾನದ ಸ್ಥಿತಿಯನ್ನು ತಲುಪುತ್ತೀಯೋ, ಆಗ ನಿನಗೆ ಈ ಸಂಘದಿಂದ ಪ್ರಯೋಜನವಿಲ್ಲ. ಆದರೆ ಬ್ರಹ್ಮಜ್ಞಾನದ ಸ್ಥಿತಿಯನ್ನು ತಲುಪುವ ತನಕ ಸಂಘ ಎಲ್ಲ ಬಗೆಯ ಅನುಕೂಲತೆಗಳನ್ನೂ ನಿನಗೆ ಕಲ್ಪಿಸಿಕೊಡು

ತ್ತದೆ. ಎಲ್ಲವೂ ಈ ಸಂಘದಿಂದಲೇ ಆಗುವುದೆಂದು ತಿಳಿಯಬಾರದು. ಸಂಘದಿಂದ ಎಷ್ಟು ಸಾಧ್ಯವೋ ಅಷ್ಟು ಉಪಯೋಗ ಮಾಡಿಕೊಳ್ಳ ಬೇಕು. ಒಳ್ಳೆಯ ಸ್ಥಳದಲ್ಲಿ ಕುಳಿತು ಜಪ, ಧ್ಯಾನ ಮಾಡುತ್ತೇವೆಂದು ನಾವೇನೋ ಹೇಳಬಹುದು. ಒಳ್ಳೆಯ ಸ್ಥಳದಲ್ಲಿ ಸಾವಿರಾರು ಜನ ಕುಳಿತು ಧ್ಯಾನ ಮಾಡುತ್ತಾರೆ, ಆದರೆ ಅವರಿಂದ ಧ್ಯಾನ ಸಾಧ್ಯವಾಗು ವುದಿಲ್ಲ. ಸಂಘದ ಸಹಾಯದೊಂದಿಗೆ ಆಂತರಿಕ ಭಾವದಿಂದ ಯಾರು ಪ್ರಯತ್ನ ಮಾಡುತ್ತಾರೋ, ಅದರಿಂದ ಅವರಿಗೆ ಉನ್ನತಿಯುಂಟಾಗು ತ್ತದೆ. ಈ ಸಂಘಕ್ಕೆ ಸೇರಿಕೊಂಡ ತಕ್ಷಣ ಎಲ್ಲವೂ ಸಿದ್ಧಿಸುತ್ತದೆ ಎಂದು ತಿಳಿದುಕೊಂಡು, ಅನಂತರ ಇಲ್ಲಿ ಏನೂ ಆಗಲಿಲ್ಲ ಎಂದು ಮಾತ್ರ ಹೇಳಬಾರದು. ನಮ್ಮ ಕಾಲದಲ್ಲಿ ಬಹಳ ವೈರಾಗ್ಯಪರನಾದ ಒಬ್ಬರು ಸಾಧುಗಳಿದ್ದರು. ಅನಂತರ ಅವರ ಪತನವಾಯಿತು. ಅವರು ಏನು ಹೇಳುತ್ತಿದ್ದರು ಗೊತ್ತೆ? ಅವರು ಸಂಘದ ಮೇಲೆ ದೋಷಾರೋಪಣೆ ಮಾಡಲಿಲ್ಲ; ಅವರು ಹೇಳುತ್ತಿದ್ದರು : ''ಸಂಘ ಇಷ್ಟೊಂದು ವ್ಯವಸ್ಥೆ ಮಾಡಿಕೊಟ್ಟರೂ ನನ್ನ ದೌರ್ಭಾಗ್ಯ; **'ಮನುಷ್ಯತ್ವಂ, ಮುಮುಕ್ಷುತ್ವಂ, ಮಹಾಪುರುಷ ಸಂಶ್ರಯಃ'** – ಇವುಗಳಲ್ಲಿ ಮನುಷ್ಯತ್ವ, ಮಹಾ ಪುರುಷರ ಸಂಶ್ರಯ ಲಭಿಸಿದೆ. ಆದರೂ ಈ ಮುಮುಕ್ಷುತ್ವ ಬರಲೇ ಇಲ್ಲ. ಇದನ್ನು ಪ್ರಾಯೋಗಿಕವಾಗಿ ಜೀವನದಲ್ಲಿ ತರಲು ನನ್ನಿಂದಾಗ ಲಿಲ್ಲ; ಇವುಗಳನ್ನು utilize ಮಾಡಲು ನನ್ನಿಂದ ಆಗಲಿಲ್ಲ.'' ಇವು ಮೂರೂ ಬೇಕು. ಬರೀ ಮುಮುಕ್ಷುತ್ವವಿದ್ದರೂ ಸಾಕ್ಷಾತ್ಕಾರವಾಗದು. ಮುಮುಕ್ಷತ್ವದ ಮಾರ್ಗದಲ್ಲಿ ಮೂಲಧನವಿರಬೇಕು. ಮನುಷ್ಯ ಜೀವನವೇ ಮುಮುಕ್ಷತ್ವಕ್ಕೆ ಮೂಲಧನ. ಕೇವಲ ಮಹಾಪುರುಷ ಸಂಶ್ರಯವಿದ್ದರೂ ಸಾಲದು, ಮುಮುಕ್ಷತ್ವವಿಲ್ಲದೆ ಏನೂ ಆಗದು.

**ಪ್ರಶ್ನೆ:** ಮನುಷ್ಯತ್ವ ಇಲ್ಲದೆ ಮುಮುಕ್ಷುತ್ವ ಬರಲು ಸಾಧ್ಯವೇ?

**ಮಹಾರಾಜ್:** ಸಾಧ್ಯವೋ ಅಸಾಧ್ಯವೋ ನಮಗೆ ತಿಳಿದಿಲ್ಲ. ಸಾಧ್ಯ ವಿರಬಹುದು. ದೇವತೆಗಳಿಗೆ ಅದು ಸಾಧ್ಯ. ಆದರೆ ದೇವತೆಗಳು ಭೋಗಾಸಕ್ತರು; ಅವರು ವಾಸಿಸುವುದೇ ಭೋಗಜೀವನದ ಮಧ್ಯೆ. ಹಾಗಾಗಿ ಅವರಿಗೆ ಸ್ವಲ್ಪ ಮುಮುಕ್ಷುತ್ವವೇನೋ ಲಭಿಸಬಹುದು.

**ಪ್ರಶ್ನೆ:** ಕಠೋಪನಿಷತ್ತಿನಲ್ಲಿ ಇದೆಯಲ್ಲವೆ, 'ಛಾಯಾತಪಯೋರಿವ..'

**ಮಹಾರಾಜ್:** ಹೌದು ಇದೆ. ಅಲ್ಲಿ,

**ಯಥಾದರ್ಶೇ ತಥಾತ್ಮನಿ**
**ಯಥಾ ಸ್ವಪ್ನೇ ತಥಾ ಪಿತೃಲೋಕೇ ।**
**ಯಥಾಪ್ಸು ಪರೀವ ದದೃಶೇ ತಥಾ ಗಂಧರ್ವಲೋಕೇ ।**
**ಛಾಯಾತಪಯೋರಿವ ಬ್ರಹ್ಮಲೋಕೇ ॥** *(ಕಠೋಪನಿಷತ್, ೨.೩.೫)*

–ಎನ್ನಲಾಗಿದೆ. ಆದರೆ ಯಾವಾಗ ಬ್ರಹ್ಮಜ್ಞಾನವುಂಟಾಗುತ್ತದೋ, ಆಗ ಅವನು ಯಾವ ಲೋಕದಲ್ಲಿರುವನೋ, ಆ ಲೋಕಕ್ಕೆ ಸೀಮಿತ ನಾಗಿರನು. ಫಲವು ಎಲ್ಲೆಡೆ ಒಂದೇ ರೀತಿ. ಇದನ್ನು ಸ್ಪಷ್ಟವಾಗಿ ವೈಚಾ ರಿಕವಾಗಿ ಉಲ್ಲೇಖಿಸಲಾಗಿದೆ. ಅಂತಿಮ ಫಲ ಎಲ್ಲರಿಗೂ ಒಂದೇ ಆಗಿದೆ. ಬ್ರಹ್ಮಜ್ಞಾನದಲ್ಲಿ ಯಾರಾದರೂ ಸ್ಥಿತನಾಗಿರಲಿ, ಅವರಿಗಾ ಗುವ ಬ್ರಹ್ಮಜ್ಞಾನ ಒಂದೇ. ಉಪನಿಷತ್ತಿನಲ್ಲಿ ಹೀಗೆ ಹೇಳಿದೆ.

**ಪ್ರಶ್ನೆ:** ನಾಲ್ಕು ಯೋಗಗಳನ್ನೂ ನಮ್ಮ ಜೀವನದಲ್ಲಿ ಸಮನ್ವಯ ಗೊಳಿಸಬೇಕೆಂದು ಸ್ವಾಮೀಜಿ ಬಯಸಿದ್ದರು. ಇವುಗಳಲ್ಲಿ ಒಂದೊಂ ದನ್ನು ಎಷ್ಟೆಷ್ಟು ಮಾಡಬೇಕು?

**ಮಹಾರಾಜ್:** ಅದಕ್ಕೆ ಇಂತಿಷ್ಟು ಅಂತ ಅಳತೆ ಇಲ್ಲ.

**ಪ್ರಶ್ನೆ:** ಇಂತಿಷ್ಟು ಅಂತ ಏಕಿಲ್ಲ? ಇಂತಿಷ್ಟು ಧ್ಯಾನ ಮಾಡಬೇಕು, ಇಂತಿಷ್ಟು ಕರ್ಮ ಮಾಡಬೇಕು ಅಂತ ಒಂದು ಅಳತೆಯಲ್ಲಿ ನಾವು ಮಾಡುತ್ತೇವಲ್ಲ?

**ಮಹಾರಾಜ್:** ಇಲ್ಲ, ಹಾಗಾಗದು. ಹಾಗೆ ಮಾಡಿದರೆ ಧ್ಯಾನವೂ ಆಗದು, ಕರ್ಮವೂ ಆಗದು.

**ಪ್ರಶ್ನೆ:** ಯಾಕಾಗದು ಮಹಾರಾಜ್?

**ಮಹಾರಾಜ್:** ಇಂತಿಷ್ಟು ಅಂತ ಅಳತೆ ಮಾಡಲು ಅದೇನು ವೈದ್ಯರು ಕೊಡುವ ಔಷಧಿಯೆ?

**ಪ್ರಶ್ನೆ:** ಒಂದು ಕಾಲದ ಅವಧಿಯನ್ನು ಭಾವಿಸಬಹುದಲ್ಲವೆ? ಇಡೀ ದಿನದಲ್ಲಿ ಇಷ್ಟು ಘಂಟೆ ಧ್ಯಾನ, ಇಷ್ಟು ಘಂಟೆ ಅಧ್ಯಯನ – ಹೀಗೆ.

**ಮಹಾರಾಜ್:** ಹಾಗೆ ಮಾಡಲಾಗದು.

**ಪ್ರಶ್ನೆ:** ಒಂದು routine (ದಿನಚರಿ) ಇರುತ್ತದಲ್ಲವೆ?

**ಮಹಾರಾಜ್:** Routine ಯಾತಕ್ಕಾಗಿ? ಪ್ರತಿನಿತ್ಯ ಮಾಡುವುದನ್ನು ನಿಲ್ಲಿಸಬಾರದೆಂದು, ಅಷ್ಟೆ. ಕೆಲಸ ಮಾಡಲು ಒಂದು routine ಬೇಕೆಂದಿಲ್ಲ. ಮಾಡುವುದನ್ನು ಮಾಡುತ್ತಾ ಹೋಗು.

**ಪ್ರಶ್ನೆ:** ಕರ್ಮ ಮತ್ತು ಉಪಾಸನೆ ಇವುಗಳಲ್ಲಿ ಯಾವುದನ್ನು ಎಷ್ಟು ಮಾಡಲಿ?

**ಮಹಾರಾಜ್:** 'ಅಡುಗೆ ಮಾಡುವವನಿಗೆ ತಲೆಗೂದಲು ಕಟ್ಟಲು ಬರುವುದಿಲ್ಲವೆ?' ಎಂದ ಹಾಗಾಯಿತು (ಬಂಗಾಳಿ ಗಾದೆ). (ಎಲ್ಲ ಕೆಲಸಗಳನ್ನೂ ಮಾಡಬಲ್ಲ ಎಂದರ್ಥ – *ಅನುವಾದಕ*). ಯಾರು ಭಕ್ತಿಯನ್ನು ಆಚರಿಸುತ್ತಾನೋ, ಅವನು ಜ್ಞಾನವಿಚಾರ ಮಾಡುವು ದಿಲ್ಲವೆ? ಯಾರು ಜ್ಞಾನವಿಚಾರ ಮಾಡುತ್ತಾನೋ ಅವನು ಕರ್ಮ ಮಾಡುವುದಿಲ್ಲವೆ ?

**ಪ್ರಶ್ನೆ:** ಅಂದರೆ ಒಂದನ್ನು ಅಭ್ಯಾಸ ಮಾಡುವಾಗ ಉಳಿದವೂ ಅದರ ಜೊತೆಗೆ ಬರುವವು, ಅಲ್ಲವೆ? ಅಂದರೆ ಒಂದರ ಮಧ್ಯೆಯೇ ಜ್ಞಾನ, ಭಕ್ತಿಗಳು ಇರುತ್ತವೆ ಎಂದರ್ಥವೆ?

**ಮಹಾರಾಜ್:** ನೀನೇನು ಕರ್ಮ ಮಾಡುತ್ತೀಯೋ, ಅದರೊಂದಿಗೆ ಜ್ಞಾನ-ವಿಚಾರವನ್ನೂ ಮಾಡುವೆ, ಭಕ್ತಿಯನ್ನೂ ಆಚರಿಸುವೆ; ಯೋಗವನ್ನೂ ಮಾಡುವೆ. ಎಲ್ಲವನ್ನೂ ಒಟ್ಟಿಗೇ ಮಾಡುವೆ. ಕಣ್ಣಿ ನಿಂದ ನೋಡುವೆ, ಕಿವಿಯಿಂದ ಕೇಳುವೆ, ಬಾಯಿಯಿಂದ ಮಾತಾ ಡುವೆ. ಇವೆಲ್ಲವನ್ನೂ ಒಂದೇ ಸಲ ಮಾಡುವೆ ತಾನೆ?

**ಪ್ರಶ್ನೆ:** ಹೌದು.

**ಮಹಾರಾಜ್:** ಅದೇ ರೀತಿ.

**ಪ್ರಶ್ನೆ:** ಒಂದೇ ಯೋಗದಲ್ಲಿ ಉಳಿದ ಮೂರೂ ಸೇರಿಕೊಂಡಿವೆಯೆ?

**ಮಹಾರಾಜ್:** ಹೌದು, ಸೇರಿಕೊಂಡಿರುತ್ತವೆ.

**ಪ್ರಶ್ನೆ:** ನಾವು ಕೆಲಸ ಮಾಡಿಯಾದ ಮೇಲೆ ಉಪಾಸನೆಗಾಗಿ ಕುಳಿತು ಕೊಳ್ಳುತ್ತೇವೆ, ಅಥವಾ ಅದರ ನಡುವೆಯೇ ಒಂದು ಕಾಲವನ್ನು ನಿಗದಿಮಾಡುತ್ತೇವೆ. ಹಾಗಾದರೆ ಇದು ಬೇರೆ..

**ಮಹಾರಾಜ್:** ಇದೇ ನಮ್ಮ ಅಪೂರ್ಣತೆ. ಎಲ್ಲಿ ಕರ್ಮ ಮಾಡು ತ್ತೇವೋ ಅಲ್ಲಿ ಯೋಗವಿಲ್ಲ; ಎಲ್ಲಿ ಯೋಗ ಮಾಡುತ್ತೇವೋ ಅಲ್ಲಿ ಭಕ್ತಿಯಿಲ್ಲ; ಭಕ್ತಿಯನ್ನಾಚರಿಸುವಲ್ಲಿ ಜ್ಞಾನವಿಲ್ಲ. ಇದನ್ನೇ ನಮ್ಮಲ್ಲಿನ ಅಪೂರ್ಣತೆ ಎಂದು ಹೇಳುವುದು.

**ಪ್ರಶ್ನೆ:** ಮಹಾರಾಜ್, ನಾವು ಸಾಮಾನ್ಯ ಜನರ ವಿಷಯ ಹೇಳುತ್ತೇವೆ, ಒಬ್ಬಾತ ಕನಿಷ್ಠ ಪಕ್ಷ ಒಂದು plan ಮಾಡಿ, ಇಂತಿಷ್ಟು ಸಮಯ – ಒಂದು ಘಂಟೆ ಜಪ, ಒಂದೂವರೆ ಘಂಟೆ ಜಪ ಎಂದು ಮಾಡುತ್ತಾನೆ.

**ಮಹಾರಾಜ್:** ಹಾಗೆ ಮಾಡಲಿ. ಆದರೆ ಏಕೆ ಅದನ್ನು ಮಾಡುತ್ತಾ ನೆಂದು ಅವನಿಗೆ ತಿಳಿದಿರಬೇಕು, ಅಷ್ಟೆ. ಗುರಿ ತಲುಪಲು ಅಥವಾ ಮುಕ್ತಿಗಾಗಿ ವಿಶೇಷ ಪ್ರಯತ್ನ ಮಾಡಲೇಬೇಕು. ಇದರಲ್ಲಿ ಇದಕ್ಕೆ ಇಂತಿಷ್ಟು, ಅದಕ್ಕೆ ಇಂತಿಷ್ಟು ಅಂತ ಮಾಡಬಾರದು. ಜ್ಞಾನಮಾರ್ಗ ವನ್ನು ಅವಲಂಬಿಸುವಾಗ ಭಕ್ತಿಯನ್ನೂ ಆಚರಿಸಬೇಕು. ಭಕ್ತಿಮಾರ್ಗ ದಲ್ಲಿ ನಡೆಯುವಾಗ ಕರ್ಮವನ್ನು ಜೊತೆಗೂಡಿಸಬೇಕು. ಕರ್ಮ ಮಾಡುವಾಗ ಯೋಗವನ್ನು ಸೇರಿಸಬೇಕು. ಎಲ್ಲ ಏಕಕಾಲದಲ್ಲಿ ನಡೆಯಬೇಕು, ಭಾಗಶಃ ಅಲ್ಲ. ಅರ್ಥವಾಯಿತೆ?

**ಪ್ರಶ್ನೆ:** ಹೌದು. ಎಲ್ಲವೂ ಒಂದೇಬಾರಿ ನಡೆಯುವುವು; ಒಂದರ ಜೊತೆಗೆ ಉಳಿದವೂ ಇರುವವು.

**ಮಹಾರಾಜ್:** ಒಂದೇ ಬಾರಿಗೆ, ಒಂದೇ ಕಾಲದಲ್ಲಿ ಯೋಗ ಮಾಡು ವುದೇ ಸಮನ್ವಯ. '**ಯುಗಪತ್**' – ಪ್ರತಿಯೊಂದು ಯೋಗದಲ್ಲೂ ಉಳಿದ ಯೋಗಗಳು ಅಂತರ್ಗತವಾಗಿವೆ.

**ಪ್ರಶ್ನೆ:** ಆಚಾರ್ಯ ಶಂಕರರು '**ವಿವೇಕ ಚೂಡಾಮಣಿ**'ಯಲ್ಲಿ ಪ್ರಮಾದದ ವಿಚಾರವಾಗಿ ಸಾಕಷ್ಟು ಹೇಳುತ್ತಾರೆ, ಸಾಧಕರ ಜೀವನ ದಲ್ಲಿ ಪ್ರಮಾದ ಬರಬಾರದು ಎನ್ನುತ್ತಾರೆ. ನಮ್ಮ ದೈನಂದಿನ ಜೀವನ ದಲ್ಲಿ ಅದನ್ನು ಹೇಗೆ ಅಳವಡಿಸಿಕೊಳ್ಳಬೇಕು?

**ಮಹಾರಾಜ್:** ಗುರಿಯನ್ನು ಮರೆಯಬಾರದು. ಏನು ಮಾಡಬೇಕೆಂ ದಿದ್ದರೂ ನಿನ್ನ ಗುರಿಯನ್ನು ಗಮನದಲ್ಲಿಟ್ಟುಕೊಂಡೇ ಮಾಡಬೇಕು. ನಮ್ಮ ಅಂತಿಮ ಗುರಿ ಮುಕ್ತಿ ಅಥವಾ ಬ್ರಹ್ಮಸ್ವರೂಪದ ಸ್ಥಿತಿಯನ್ನು ಪಡೆಯುವುದು. ಆ ಗುರಿಯನ್ನು ನೆನಪಿನಲ್ಲಿಟ್ಟುಕೊಂಡೇ ಎಲ್ಲ ವನ್ನೂ ಮಾಡಬೇಕು. ಅಪ್ರಮಾದವೆಂದರೆ ಇದೇ.

**ಪ್ರಶ್ನೆ:** ಅಪ್ರಮಾದವನ್ನು ಹೊಂದಲು ಬೇರೆ ಸಾಧನೆ ಇದೆಯೆ?

**ಮಹಾರಾಜ್:** ಇದೇ ಸಾಧನೆ, ಅಪ್ರಮಾದಕ್ಕೆ ಬೇರೆ ಏನು ಸಾಧನೆ?

**ಪ್ರಶ್ನೆ:** ಪ್ರಮಾದವನ್ನು ತಡೆಯುವುದು, ಆ ಪ್ರಯತ್ನವೇ ಸಾಧನೆ.

**ಮಹಾರಾಜ್:** ಪ್ರಯತ್ನವಲ್ಲ, ಗುರಿಯನ್ನು ಮನಸ್ಸಿನಲ್ಲಿ ಸದಾ ಎಚ್ಚರವಾಗಿ ಇಟ್ಟುಕೊಳ್ಳುವುದು.

**ಪ್ರಶ್ನೆ:** ತೋತಾಪುರಿ ನಿರ್ವಿಕಲ್ಪ ಸಮಾಧಿ ಹೊಂದಿದ್ದರು. ಅವರಿಗೆ ಬ್ರಹ್ಮಜ್ಞಾನವೇ ಆಗಿತ್ತು, ಆದರೂ ಅವರು ಒಬ್ಬ ವ್ಯಕ್ತಿಗೆ ಕೋಪದಿಂದ ಹೊಡೆಯಲು ಹೊರಟಿದ್ದರು. ಹೀಗೇಕೆ ಆಗುತ್ತದೆ?

**ಮಹಾರಾಜ್:** ಶ್ರೀರಾಮಕೃಷ್ಣರು ಹೇಳುತ್ತಿದ್ದರು, ಎಲ್ಲವೂ ಮಹಾ ಮಾಯೆಯ 'ಅಂಡರ್' (ಅಧೀನದಲ್ಲಿ) ಎಂದು.

**ಪ್ರಶ್ನೆ:** ಆದರೆ ತೋತಾಪುರಿಗೆ ಬ್ರಹ್ಮಜ್ಞಾನವಾಗಿತ್ತಲ್ಲವೆ?

**ಮಹಾರಾಜ್:** ಆದರೇನಂತೆ? ದೇಹಧಾರಿಯಾದವನು ಮಹಾ ಮಾಯೆಗೆ ಅಧೀನ.

**ಪ್ರಶ್ನೆ:** ಅಧೀನ ಎಂದರೇನು?

**ಮಹಾರಾಜ್:** ಅಧೀನವೆಂದರೆ, ಮಹಾಮಾಯೆಯ ಮೂಲಕವೇ ಎಲ್ಲರೂ ನಿಯಂತ್ರಣಕ್ಕೊಳಪಡುತ್ತಾರೆ.

**ಪ್ರಶ್ನೆ:** ಜಗತ್ತಿನ ದುಃಖದ ಅನುಭವವೆಲ್ಲ ಇದರೊಂದಿಗೆ (ತಮ್ಮ ದೇಹವನ್ನು ಕುರಿತು) ಆಗಿ ಹೋಯಿತು ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಈ ವಾಕ್ಯದ ಅರ್ಥ ಏನು? ಇನ್ನೊಂದೆಡೆ ಶ್ರೀಮಾತೆ ಎಷ್ಟೊಂದು ಕಷ್ಟ ಅನುಭವಿಸಿದರು! ಸ್ವಾಮೀಜಿ, ಶ್ರೀರಾಮಕೃಷ್ಣರ ನೇರ ಶಿಷ್ಯಂದಿರು ಎಷ್ಟೊಂದು ಕಷ್ಟ ಅನುಭವಿಸಿದ್ದರು! ಈಗಲೂ ಜಗತ್ತಿನಲ್ಲಿ ಜನರ ಕಷ್ಟಗಳು ಕಡಿಮೆಯಾದದ್ದು ಕಂಡುಬರುತ್ತಿಲ್ಲ.

**ಮಹಾರಾಜ್:** ಶ್ರೀರಾಮಕೃಷ್ಣರು ಏನು ಹೇಳಿದ್ದಾರೋ, ಅದರ ತಾತ್ಪರ್ಯವೇನೆಂದು ಅವರೇ ಬಲ್ಲರು. ಕ್ರೈಸ್ತರು ಹೇಳುತ್ತಾರೆ, 'vicarious atonement'– ಕ್ರಿಸ್ತನು ಪರರ ದುಃಖವನ್ನು ಸ್ವೀಕ ರಿಸಿ, ತನ್ನ ಪ್ರಾಣವನ್ನೇ ಶಿಲುಬೆಗೆ ಅರ್ಪಿಸಿದ ಎಂದು. ಪ್ರಾಣಾರ್ಪಣೆ ಮಾಡಿ, ಆ ಮೂಲಕ ಜಗತ್ತಿನ ದುಃಖಕ್ಕೆ, ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿ ಕೊಂಡ. ಇದರಿಂದ ಜಗತ್ತಿನ ಪಾಪ ಸಂಪೂರ್ಣ ದೂರವಾಯಿತೆ? ಗೀತೆಯಲ್ಲಿ ಜಗತ್ತಿನ ಬಗ್ಗೆ, '**ಅನಿತ್ಯಮಸುಖಂ ಲೋಕ ಮಿಮಂ ಪ್ರಾಪ್ಯ ಭಜಸ್ವ ಮಾಮ್**' ಎಂದು ಹೇಳಿದೆ. ಈ ಜಗತ್ತು ಅನಿತ್ಯ ಮತ್ತು ದುಃಖಮಯ. ಇಲ್ಲಿಗೆ ಬಂದು ನಾವು ಸಾಧನೆ, ಭಜನೆ ಮಾಡುತ್ತೇವೆ. ಈ ರೀತಿಯ ಒಂದು ಜೀವನವನ್ನು ಶ್ರೀರಾಮಕೃಷ್ಣರು ತೋರಿಸಿಕೊಟ್ಟು ಹೋದರು. ನೋಡು, ಅವರು ಎಷ್ಟೊಂದು ದುಃಖ ವನ್ನು ಅನುಭವಿಸಿದರು! ಅವರದು ಅಪಾಪವಿದ್ಧ (ಪಾಪರಹಿತ) ಶರೀರ. ಆದರೂ ಅವರಿಗೆ ಅಷ್ಟೊಂದು ಕಷ್ಟ ಯಾಕೆ ಬಂತು? ಅವರು ಹೇಳುತ್ತಾರೆ, ಯಾರು ತಮ್ಮಲ್ಲಿಗೆ ಬರುತ್ತಾರೋ, ಅವರ ದುಃಖ– ಕಷ್ಟಗಳನ್ನು ತಾವು ಸ್ವೀಕರಿಸಬೇಕಾಗುವುದು ಎಂದು. ಈ ದೇಹದ ಮೂಲಕವೇ ಎಲ್ಲವನ್ನೂ ಅನುಭವಿಸಬೇಕಾಗುತ್ತದೆ.

**ಪ್ರಶ್ನೆ:** ಅಂದರೆ, ಇದರಿಂದ ಜನರ ದುಃಖಾನುಭವ ಇಲ್ಲದಾಗುವು ದಿಲ್ಲ ಎಂದು ಹೇಳಬಹುದು.

**ಮಹಾರಾಜ್:** ಹೌದು, ಇಲ್ಲದಿದ್ದರೆ ಜಗತ್ತು ಜಗತ್ತಾಗಿ ಉಳಿಯು ತ್ತಿರಲಿಲ್ಲ.



ಜಪಾನಿನ ಕಥೆಗಳು

# ಸೋಮಾರಿ ಹುಡುಗನ ಕತೆ

ಬಂಗಾಳಿ ಮೂಲ : ರಾಜಕೃಷ್ಣ ಭಟ್ಟಾಚಾರ್ಯ ಚಿತ್ರ : ಜುಂಕೋ ಭಟ್ಟಾಚಾರ್ಯ ಕನ್ನಡಾನುವಾದ : ಗಿರಿಜಾದೇವಿ



ಅನೇಕಾನೇಕ ವರ್ಷಗಳ ಹಿಂದೆ ಒಬ್ಬ ಸೋಮಾರಿ ಹುಡುಗನಿದ್ದ. ಅವನಿಗೆ ಯಾವ ಕೆಲಸ ಮಾಡಲೂ ಇಚ್ಛೆ ಇರಲಿಲ್ಲ. ಎಲ್ಲೋ ಒಂದು ಕಡೆ ಆಲಸಿಯಾಗಿ ಮಲಗಿರುತ್ತಿದ್ದ. ಕಾಗದಿಂದ ಒಂದು ಕೊಳವೆ ತಯಾರಿಸಿ ಅದರ ಮೂಲಕ ನಾಲ್ಕೂ ದಿಕ್ಕುಗಳನ್ನು ನೋಡುತ್ತಾ ಕಾಲ ಕಳೆಯುತ್ತಿದ್ದ. ಒಂದು ದಿನ ಆಕಾಶಮಾರ್ಗವಾಗಿ ಹೋಗುತ್ತಿದ್ದ ಒಂದು ದುಷ್ಟ ಮಾಯಾವಿ ಭೂತ* ಟೀಂಗು ಹುಡುಗನ ಕಾಗದದ ಕೊಳವೆಯನ್ನು ಗಮನಿಸಿತು. ಅದು ಕೆಳಕ್ಕೆ ಇಳಿದು ಬಂದು, ಸೋಮಾರಿ ಹುಡುಗನಿಗೆ ಹೇಳಿತು, ''ನಿನ್ನ ಕೊಳವೆಯನ್ನು ನನಗೆ ಕೊಡುತ್ತೀಯಾ?'' ಹುಡುಗ ಹೇಳಿದ, ''ಖಂಡಿತವಾಗಿಯೂ ಕೊಡುತ್ತೇನೆ. ಆದರೆ ಅದಕ್ಕೆ ಬದಲಾಗಿ ನಿನ್ನ ಮಾಯಾ ಬೀಸಣಿಗೆಯನ್ನು ನನಗೆ ಕೊಡಬೇಕು. ಒಪ್ಪಿಗೆಯೆ?'' ಟೀಂಗು ಹೇಳಿತು, ''ಅದಕ್ಕೇನಂತೆ, ತಗೋ ನನ್ನ ಮಾಯಾ ಬೀಸಣಿಗೆ.'' ಸೋಮಾರಿ ಹುಡುಗನಿಗೆ ಬಲು ಸಂತೋಷ ವಾಯಿತು. ಟೀಂಗು ಕೊಳವೆಯನ್ನು ತೆಗೆದುಕೊಂಡು ಆಕಾಶಮಾರ್ಗದಲ್ಲಿ ಹೊರಟುಹೋಯಿತು. ಸೋಮಾರಿ ಹುಡುಗ ಮಾಯಾಬೀಸಣಿಗೆಯನ್ನು ಅತ್ತಿತ್ತ ಆಡಿಸುತ್ತಾ, ಯಾವುದೇ ಉದ್ದೇಶವಿಲ್ಲದೆ 'ಮೂಗು ಉದ್ದವಾಗಲಿ, ಮೂಗು ಉದ್ದವಾಗಲಿ' ಎನ್ನುತ್ತಿದ್ದ. ಅವನು ಹಾಗೆ ಹೇಳು ತ್ತಿದ್ದಂತೆ ಅವನ ಮೂಗು ಬೆಳೆಯುತ್ತಾ ಬೆಳೆಯುತ್ತಾ ಆಕಾಶ ವನ್ನು ಮುಟ್ಟಿತು! ಅದೇ ಸಮಯದಲ್ಲಿ ದೇವತೆಗಳು ಆಕಾಶ ದಲ್ಲಿ ಒಂದು ಸೇತುವೆ ತಯಾರು ಮಾಡುತ್ತಿದ್ದರು. ಸೇತು ವೆಯ ನಿರ್ಮಾಣಕ್ಕೆ ಬೇಕಾದ ಕಂಬಗಳಲ್ಲಿ ಒಂದು ಕಡಿಮೆ ಯಾಗಿಬಿಟ್ಟಿತು. ಸೋಮಾರಿ ಹುಡುಗನ ಮೂಗು ನೇರವಾಗಿ ದೇವತೆಗಳು ನಿರ್ಮಿಸುತ್ತಿದ್ದ ಸೇತುವೆಯ ಕೆಳಭಾಗವನ್ನು ಸ್ಪರ್ಶಿಸುತ್ತಿತ್ತು! ದೇವತೆಗಳು ಮಹದಾನಂದದಿಂದ ಉದ್ಗಾರ ಮಾಡಿದರು, ''ಇಲ್ಲೇ ಇದೆಯಲ್ಲ; ಇಲ್ಲಿ ನೋಡಿ, ಒಳ್ಳೇ ಕಂಭವೇ ಸಿಕ್ಕಿಬಿಟ್ಟಿತಲ್ಲ. ಇನ್ನೇಕೆ ಯೋಚನೆ?'' ಹೀಗೆ ಹೇಳಿದ್ದೇ, ಹುಡುಗನ ಮೂಗನ್ನು ಸೇತುವೆಗೆ ಸೇರಿಸಿ, ಭದ್ರವಾಗಿ ಬಿಗಿದು ಕಟ್ಟಿದರು. ಇತ್ತ ತನ್ನ ಮೂಗು ಎಲ್ಲೋ ಭದ್ರವಾಗಿ ಸಿಕ್ಕಿ ಹಾಕಿಕೊಂಡಿರುವ ಅನುಭವವಾಯಿತು ಸೋಮಾರಿ ಹುಡುಗನಿಗೆ. ಅವನು ಗಾಬರಿಗೊಂಡು ಮಾಯಾ ಬೀಸಣಿಗೆಯನ್ನು ತಿರುಗಿಸುತ್ತಾ ಹೇಳತೊಡಗಿದ, 'ಈಗ ನನ್ನ ಮೂಗು ಚಿಕ್ಕದಾಗಲಿ, ಚಿಕ್ಕದಾಗಲಿ' ಎಂದು. ಆದರೆ ಮೂಗು ಹಿಂದಕ್ಕೆ ಬರುವಂತಿಲ್ಲ. ಹಗ್ಗಗಳಿಂದ ಬಿಗಿದು ಕಟ್ಟಿಬಿಟ್ಟಿದ್ದಾರೆ ದೇವತೆ ಗಳು. ಆದ್ದರಿಂದ ಮೂಗಿನ ಉದ್ದ ಕಡಿಮೆಯಾದಂತೆಲ್ಲ, ಅದರೊಂದಿಗೇ ಆ ಹುಡು ಗನೂ ಆಕಾಶದಲ್ಲಿ ಹಾರಲು ಪ್ರಾರಂಭಿಸಿದ. ಅವನು ಆಕಾಶದಲ್ಲಿ ಹಾರುತ್ತಾ ಹಾರುತ್ತಾ, ಹಾರಾಡುತ್ತಲೇ ಇದ್ದುಬಿಟ್ಟ! ✷

(*ಜಪಾನಿಯಲ್ಲಿ ಇದನ್ನು 'ಟೀಂಗು' ಅಥವಾ 'ತೇಂಗು' – ಎಂದರೆ, ದುಷ್ಟಭೂತ ಎನ್ನುತ್ತಾರೆ. ಇವಕ್ಕೆ ಉದ್ದನೆಯ ಮೂಗು ಇರುತ್ತದೆ, ಕೈಯಲ್ಲಿ ಐಂದ್ರಜಾಲಿಕ ಬೀಸಣಿಗೆ ಹಿಡಿದಿರುತ್ತವೆ.)



# ಯೋಗವಾಸಿಷ್ಠದ ಕಥೆಗಳು

ಸ್ವಾಮಿ ವೀರೇಶಾನಂದ

ಕಥಾಗುಚ್ಛ - ೪



## ಕರ್ಕಟಿಯ ಕಥೆ

ವಸಿಷ್ಠರು ರಾಮನಿಗೆ ಉಪದೇಶ ಮಾಡುತ್ತಿದ್ದಾರೆ: ರಾಮ, ಕರ್ಕಟಿ ಎನ್ನುವ ರಾಕ್ಷಸಿಯ ಕಥೆ ಹೇಳುತ್ತೇನೆ, ಕೇಳು. ಹಿಮಾಲಯ ಪರ್ವತದ ಮೇಲೆ ಒಬ್ಬಳು ರಾಕ್ಷಸಿ ವಾಸವಾಗಿದ್ದಳು. ಅವಳ ಹೆಸರು ಕರ್ಕಟಿ. ಅವಳದು ಭೀಕರವಾದ ಆಕಾರ. ಅವಳಿಗೆ ಯಾವಾಗಲೂ ಹಸಿವೆ. ತನ್ನ ಹಸಿವೆಯನ್ನು ನೀಗಿಸುವಷ್ಟು ಆಹಾರ ಅವಳಿಗೆ ಲಭಿಸುತ್ತಿರಲಿಲ್ಲ. ಅವಳು ಒಂದು ದಿನ ಹೀಗೆ ಆಲೋಚಿಸಿದಳು: 'ಜಂಬೂದ್ವೀಪದಲ್ಲಿ ಇರುವ ಎಲ್ಲರನ್ನೂ ಒಂದೇ ಬಾರಿಗೆ ತಿಂದು ಬಿಟ್ಟರೆ ಹೇಗೆ? ಆಗ ಮಾತ್ರ ನನ್ನ ಹಸಿವೆ ಇಂಗುವುದು ಎಂದು ಕಾಣುತ್ತದೆ. ಆದರೆ ಅಲ್ಲಿನ ಜನ ಒಳ್ಳೆಯವರು, ಭಗವದ್ಭಕ್ತರು. ಅವರನ್ನು ತೊಂದರೆಗೆ ಈಡು ಮಾಡುವುದು ಸರಿಯಲ್ಲ. ಇನ್ನುಳಿದ ಒಂದೇ ಉಪಾಯ ಎಂದರೆ ತಪಸ್ಸು ಮಾಡುವುದು. ನಾನು ತಪಸ್ಸು ಮಾಡುತ್ತೇನೆ, ತಪಸ್ಸಿನಿಂದ ದುಸ್ಸಾಧ್ಯವಾದುದನ್ನೂ ಸಂಪಾದಿಸಿಬಿಡಬಹುದು. ಸೃಷ್ಟಿಕರ್ತನಾದ ಬ್ರಹ್ಮನನ್ನು ಕುರಿತು ನಾನು ತಪಸ್ಸು ಮಾಡುತ್ತೇನೆ.'

ಹೀಗೆ ನಿಶ್ಚಯಿಸಿದ ಕರ್ಕಟಿ ಹಿಮಾಲಯದ ಉತ್ತುಂಗ ಶಿಖರವನ್ನೇರಿದಳು; ಘೋರವಾದ ತಪಸ್ಸನ್ನು ಆಚರಿಸತೊಡಗಿದಳು. ಒಂದೇ ಕಾಲಿನ ಮೇಲೆ ಶಿಲಾಮೂರ್ತಿಯಂತೆ ಸ್ತಬ್ಧವಾಗಿ ನಿಂತುಕೊಂಡಳು. ಹೀಗೆಯೇ ದಿನಗಳು ಉರುಳಿದವು; ತಿಂಗಳುಗಳು ಸಾಗಿದವು; ಹಲವು ವರ್ಷಗಳೇ ಕಳೆದುಹೋದವು. ಕ್ರಮೇಣ ಅವಳು ತೆಳ್ಳಗಾಗುತ್ತ ಬಂದಳು; ಅಸ್ಥಿಪಂಜರದಂತೆ ಕಂಡುಬಂದಳು. ಹೀಗೆ ಒಂದು ಸಾವಿರ ವರ್ಷಗಳ ಕಾಲ ಅವಳು ತಪಸ್ಸು ಮಾಡಿದಳು.

ಅನಂತರ ಸೃಷ್ಟಿಕರ್ತ ಬ್ರಹ್ಮನು ಅವಳಿಗೆ ಕಾಣಿಸಿಕೊಂಡನು. ಅವಳು ಅವನಿಗೆ ಮಣಿದಳು. ಅವನಿಂದ ಯಾವ ವರವನ್ನು ಕೇಳಲಿ ಎಂದು ಮನಸ್ಸಿನಲ್ಲಿಯೇ ಯೋಚಿಸತೊಡಗಿದಳು. ಅವಳು ತನ್ನಲ್ಲಿಯೇ ಹೀಗೆಂದುಕೊಂಡಳು: 'ನಾನು ಸೂಜಿಯಂತೆ ಆಗಿಬಿಡುವೆ; ಜೀವಂತ ಸೂಜಿಯಾಗಿಬಿಡುವೆ. ಆಗ ಎಲ್ಲ ಜೀವಿಗಳ ಶರೀರಗಳನ್ನೂ ಪ್ರವೇಶಿಸಬಹುದು. ಎಷ್ಟು ಬೇಕಾದರೂ ಆಹಾರವನ್ನು ಸೇವಿಸಬಹುದು. ನಾನು ರೋಗವನ್ನು ಹರಡುವ ಜೀವಸೂಚಿಕೆಯಾಗಿ (ಜೀವಂತ ಸೂಜಿ) ಪರಿಣಮಿಸುವೆ; ನನಗೆ ತೃಪ್ತಿಯಾಗುವಷ್ಟು ಜೀವಿಗಳ ರಕ್ತ ಹೀರುವೆ. ಈ ರೀತಿ ಹೆಚ್ಚುತ್ತಲೇ ಇರುವ ನನ್ನ ಹಸಿವೆಯನ್ನು ಇಂಗಿಸಿಕೊಳ್ಳುವೆ.'

ಅದೇ ಸಮಯಕ್ಕೆ ಬ್ರಹ್ಮನು ಹೀಗೆ ಹೇಳಿದನು: ''ಕರ್ಕಟಿ, ನಿನ್ನ ತಪಸ್ಸಿಗೆ ನಾನು ಮೆಚ್ಚಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳಿಕೋ.'' ಕರ್ಕಟಿ ತನ್ನ ಮನದಾಳದ ಇಂಗಿತವನ್ನು ತೋಡಿಕೊಂಡಳು. ಬ್ರಹ್ಮನು ಉತ್ತರಿಸಿದನು: ''ನೀನು 'ವಿಸೂಚಿಕಾ' ಎಂಬ ಹೆಸರನ್ನು ಪಡೆದುಕೊಳ್ಳುವೆ. ಯಾರು ಕಲುಷಿತ ಆಹಾರವನ್ನು ಸೇವಿಸುತ್ತಾರೋ, ಅವರ ದೇಹವನ್ನು ನೀನು ಪ್ರವೇಶಿಸುವೆ. ಯಾರು ಕೋಪಿಷ್ಠರೋ, ದುಷ್ಟರೋ ಅಥವಾ ಕೊಳಕು ಜಾಗಗಳಲ್ಲಿ ವಾಸ ಮಾಡುವರೋ ಅವರಿಗೂ ನೀನು ತೊಂದರೆ ಕೊಡುವೆ. ನೀನು ವಾತ ಮತ್ತು ಪಿತ್ಥಗಳಲ್ಲಿ ವೈಪರೀತ್ಯವನ್ನು ತರುವೆ. ಹೊಟ್ಟೆಯ ತೊಂದರೆ, ಕಾಲರಾ ಮುಂತಾದ ರೋಗಗಳನ್ನು ಉಂಟು ಮಾಡುವೆ.'' ಹೀಗೆ ಹೇಳಿ ಬ್ರಹ್ಮನು ಅದೃಶ್ಯನಾದನು.

ಕರ್ಕಟಿ 'ವಿಸೂಚಿಕಾ' ರೂಪವನ್ನು ತಾಳಿದಳು. ಜೀವಿಗಳ ದೇಹದ ಒಳಹೊಕ್ಕು ಅವರ ರಕ್ತವನ್ನು ಹೀರಲಾರಂಭಿಸಿದಳು. ಹೀಗೆ ಅವಳು ತನ್ನ ಎಣೆಯಿಲ್ಲದ ಹಸಿವನ್ನು ತೀರಿಸಿಕೊಳ್ಳುತ್ತಿದ್ದಳು. ಆದರೆ ಅವಳಿಗೆ ಒಂದು ಚಿಂತೆ ಕಾಡಲಾರಂಭಿಸಿತು. ಅವಳು ಯೋಚಿಸಿದಳು, 'ನಾನು ಎಷ್ಟೊಂದು ಜನಗಳನ್ನು ಹಿಂಸಿಸುತ್ತಿದ್ದೇನೆ! ನನ್ನದು ನಿಜಕ್ಕೂ ಕ್ರೂರವಾದ ಹೃದಯ. ಈ ಬಗೆಯ ಜೀವನವನ್ನು ನಾನು ಮುಂದುವರೆಸಲು ಇಚ್ಛಿಸುವುದಿಲ್ಲ. ನಾನು ಮತ್ತೆ ತಪಸ್ಸು ಮಾಡುತ್ತೇನೆ. ಜ್ಞಾನವನ್ನು ಪಡೆದುಕೊಳ್ಳುತ್ತೇನೆ.'

ಕರ್ಕಟಿ ಇನ್ನೊಮ್ಮೆ ಹಿಮಾಲಯಕ್ಕೆ ತೆರಳಿದಳು. ಮತ್ತೆ ಒಂದು ಸಾವಿರ ವರ್ಷಗಳ ಕಾಲ ತಪಸ್ಸು ಮಾಡಿದಳು. ಈ ಬಾರಿ ತನ್ನೆಲ್ಲ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧಳಾಗಿ, ರಾಗದ್ವೇಷಗಳಿಂದ ಪಾರಾದಳು; ಜ್ಞಾನದ ಬೆಳಕನ್ನು ಪಡೆದುಕೊಂಡಳು. ಯಾವುದನ್ನು ತಿಳಿದುಕೊಳ್ಳಬೇಕೋ ಆ ಜ್ಞಾನವನ್ನು ತಿಳಿದುಕೊಂಡು ಪುನೀತಳಾದಳು. ತನ್ನ ಹೃದಯದಲ್ಲಿ ಆನಂದದ ಅನುಭೂತಿಯನ್ನು ಅನುಭವಿಸಿದಳು.

ಬ್ರಹ್ಮನು ತಾನಾಗಿಯೇ ಅವಳ ಬಳಿಗೆ ಬಂದು ಹೀಗೆ ಹೇಳಿದನು: ''ಓ ಕರ್ಕಟಿ, ನೀನು ಸಾಕ್ಷಾತ್ಕಾರವನ್ನು ಹೊಂದಿರುವೆ. ನೀನು ಜೀವನ್ಮುಕ್ತಳಾಗಿದ್ದೀಯೆ. ಆದರೂ ಒಂದು ವರ್ಷ ಕಾಲ ರಾಕ್ಷಸಿಯ ರೂಪದಲ್ಲಿಯೇ ಇರು. ಆತ್ಮಜ್ಞಾನವಿಲ್ಲದವರನ್ನೂ, ಕ್ರೂರಿಗಳನ್ನೂ ದುಷ್ಟರನ್ನೂ ಹಿಂಸಿಸಿ, ಹೊಟ್ಟೆಹೊರೆದುಕೋ. ಅಜ್ಞಾನಿಗಳ ಬಳಿ

ಹೋಗಿ ಅವರಿಗೆ ನೀನು ಪಡೆದ ಜ್ಞಾನವನ್ನು ತಿಳಿಸಿಕೊಟ್ಟು, ಅವರಿಗೂ ಬೆಳಕು ಬರುವಂತೆ ಮಾಡು. ಅಂಥವರನ್ನು ಪಾಪಗಳಿಂದ ಪಾರು ಮಾಡು. ಯಾರು ನೀನು ಬೋಧಿಸಿದ ಜ್ಞಾನವನ್ನು ಸ್ವೀಕರಿಸುವು ದಿಲ್ಲವೋ, ಅವರನ್ನೇ ನಿನ್ನ ಆಹಾರವನ್ನಾಗಿ ಮಾಡಿಕೋ.''

ಅನಂತರ ಕರ್ಕಟಿ ನಿರ್ಗುಣ ಬ್ರಹ್ಮನನ್ನು ಕುರಿತು ಆಳವಾಗಿ ಧ್ಯಾನಿಸಿದಳು. ಅವಳು ಸಾಧಾರಣ ನೆಲೆಗೆ ಬಂದಾಗ, ಮತ್ತೊಮ್ಮೆ ಹಸಿವಿನ ಯಾತನೆಯನ್ನು ಅನುಭವಿಸಿದಳು. ಆದರೆ ಜೀವಿಗಳನ್ನು ಆಹಾರಕ್ಕೆ ಕೊಲ್ಲುವುದು ಪಾಪವೆಂದು ಭಾವಿಸಿದಳು. ಹಿಮಾಲಯದ ತಪ್ಪಲಿಗೆ ಹೋಗಿ, ಬೇಟೆಗಾರರ ರಾಜ್ಯವೊಂದನ್ನು ಸೇರಿಕೊಂಡಳು. ಅಲ್ಲಿ ಬ್ರಹ್ಮನು ಹೇಳಿದಂತೆ, ಅಜ್ಞಾನಿಗಳ ದೇಹವನ್ನು ಆಹಾರಕ್ಕೆ ಬಳಸಿಕೊಳ್ಳುತ್ತೇನೆ ಎಂದು ಯೋಚಿಸಿದಳು. ಒಂದು ರಾತ್ರಿಯ ಅಂಧಕಾರದಲ್ಲಿ ಆ ರಾಜ್ಯದ ರಾಜ ಮತ್ತು ಮಂತ್ರಿ – ಇಬ್ಬರೂ ಸೇರಿ ಕಾಡಿನಲ್ಲಿ ಅಲೆದಾಡುತ್ತಿರುವುದನ್ನು ಕಂಡಳು. ತನಗೆ ಸರಿಯಾದ ಆಹಾರ ಸಿಕ್ಕಿತು ಎಂದು ಆಕೆ ನಲಿದಾಡಿದಳು. ಅವರು ಜ್ಞಾನಿಗಳೋ ಅಲ್ಲವೋ ಎಂದು ಪರೀಕ್ಷಿಸಲು ಅವಳು ಬಯಸಿದಳು.

ಅವರ ಮುಂದೆ ಕರ್ಕಟಿ ಘೋರರೂಪದಲ್ಲಿ ನಿಂದು ಅಬ್ಬರಿಸಿದಳು: ''ಯಾರು ನೀವು? ಸಾಧುಗಳೋ, ಅಜ್ಞಾನಿಗಳೊ? ನೀವು ನನಗೆ ಸರಿಯಾಗಿ ಸಿಕ್ಕಿಬಿಟ್ಟಿರಿ. ನಿಮ್ಮ ಅದೃಷ್ಟ ಈಗ ನನ್ನ ಕೈಯಲ್ಲಿದೆ.''

ಆಗ ರಾಜ ಉತ್ತರಿಸಿದ: ''ಓ ರಾಕ್ಷಸಿ, ತುಂಬ ಕೂಗಾಡಬೇಡ. ನಿನ್ನ ಶಕ್ತಿಯನ್ನು ತೋರಿಸು. ನಿನಗೆ ಏನು ತಾನೇ ಬೇಕು? ಅಜ್ಞಾನಿಗಳು ತಮ್ಮ ಕರ್ಮಫಲಕ್ಕೆ ಹಪಹಪಿಸುತ್ತಾರೆ. ಜ್ಞಾನಿಗಳು ಯಾವ ಫಲದ ಅಪೇಕ್ಷೆಯೂ ಇಲ್ಲದೆ ಪುಣ್ಯಕರ್ಮಗಳನ್ನು ಮಾಡಿಕೊಂಡು ಹೋಗುತ್ತಾರೆ. ನಿನ್ನ ಹಾಗೆ ದುಷ್ಟರನ್ನು ಸೊಳ್ಳೆಗಳ ಹಾಗೆ ಹೊಸಕಿ ಹಾಕಲು ನಮಗೆ ಸಾಧ್ಯವಿಲ್ಲ. ಆದರೆ ಕನಸಿನಲ್ಲಿಯೂ ನಾವು ಸಜ್ಜನರಿಗೆ ದಾನ ಮಾಡಲು ಸಿದ್ಧರಿರುತ್ತೇವೆ. ಜ್ಞಾನಿಯಾದವನು ಶಾಂತಭಾವದಿಂದ ತನ್ನೆಲ್ಲ ಕರ್ಮಗಳನ್ನು ಮಾಡಿಕೊಂಡು ಹೋಗುತ್ತಾನೆ. ಎಲ್ಲವನ್ನೂ ವಿಚಾರಮಾಡಿ ಮುನ್ನಡೆಯುತ್ತಾನೆ.''

ಕರ್ಕಟಿಗೆ ಅನುಮಾನ ಬಂತು, ಇವರು ಜ್ಞಾನಿಗಳೋ ಹೇಗೆ ಎಂದು. ಅವಳು ತನ್ನಲ್ಲೇ ಯೋಚಿಸಿದಳು, 'ಇವರು ಸಾಧಾರಣ ಮನುಷ್ಯರಲ್ಲ. ಪರಿಶುದ್ಧರೂ, ಜ್ಞಾನವಂತರೂ ಆದ ಜನರನ್ನು ಅವರ ಮಾತು, ಮುಖ ಮತ್ತು ಕಣ್ಣುಗಳ ಹಾವಭಾವಗಳಿಂದಲೇ ಗುರುತಿಸಬಹುದು. ಅವೆಲ್ಲವೂ ಮನುಷ್ಯನೊಬ್ಬನ ಅಂತರಂಗವನ್ನು ಪ್ರತಿಫಲಿಸುತ್ತವೆ. ಸಾಧುಗಳಲ್ಲಿ ಮನಸ್ಸು, ಮಾತು ಮತ್ತು ಕೃತಿಗಳು ಹೊಂದಿಕೆಯಾಗಿರುತ್ತವೆ. ಮೂರ್ಖರಲ್ಲಿ ವೈಪರೀತ್ಯವಿರುತ್ತದೆ. ಇವರು ಜ್ಞಾನಿಗಳಾಗಿದ್ದರೆ ಇವರಲ್ಲಿ ಜ್ಞಾನ ಮತ್ತು ನೈತಿಕ ಶಕ್ತಿಗಳು ಖಂಡಿತ ಇರುತ್ತವೆ. ಹೀಗಾಗಿ ನಾನು ಇವರಿಗೆ ಏನೂ ಮಾಡಲಾಗದು. ಅವಿನಾಶಿಯಾದ ಆತ್ಮನನ್ನು ಕುರಿತ ಜ್ಞಾನವು ಸಾವಿನ ಭಯವನ್ನೂ ಧ್ವಂಸಮಾಡುತ್ತದೆ.'

ಅನಂತರ ಕರ್ಕಟಿ ಹೀಗೆಂದಳು: ''ಓ ಸದ್ಗುಣ ಸಂಪನ್ನರಾದ ಮನುಜರೇ, ನೀವು ಧೈರ್ಯವಂತರು, ವೀರರು. ನೀವು ಯಾರು? ಎಲ್ಲಿಂದ ಬಂದಿದ್ದೀರಿ? ಹೇಳಿರಿ.''

ಅದಕ್ಕೆ ಮಂತ್ರಿ ಹೀಗೆ ಉತ್ತರವಿತ್ತನು: ''ಇವರು ಕಿರಾತ ರಾಜ್ಯದ ರಾಜರು; ನಾನು ಇವರ ಮಂತ್ರಿ. ನಾವು ರಾತ್ರಿ ಗಸ್ತು ತಿರುಗುತ್ತಿದ್ದೇವೆ. ಸಜ್ಜನರನ್ನು ಕಾಪಾಡಿ, ದುರ್ಜನರನ್ನು ಶಿಕ್ಷಿಸುವುದೇ ನಮ್ಮ ಕಾರ್ಯ.''

ಕರ್ಕಟಿ ಹೇಳಿದಳು: ''ರಾಜನಿಗೆ ಒಳ್ಳೆಯ ಮಂತ್ರಿ ಇರಬೇಕು. ಕೆಟ್ಟಬುದ್ಧಿಯ ಮಂತ್ರಿಯನ್ನು ಇಟ್ಟುಕೊಂಡಿದ್ದರೆ, ರಾಜನು ಹಾಳಾಗುತ್ತಾನೆ. ಅದರಂತೆಯೇ, ಒಳ್ಳೆಯ ರಾಜನಾದವನು, ಶ್ರೇಷ್ಠ ಚಾರಿತ್ರ್ಯದ ಮಂತ್ರಿಯನ್ನೇ ಆಯ್ಕೆಮಾಡಿಕೊಳ್ಳಬೇಕು. ಯಾರು ಶಾಸ್ತ್ರಜ್ಞರೋ, ಆಧ್ಯಾತ್ಮಿಕ ವಿಷಯಗಳಲ್ಲಿ ಪರಿಣತರೋ ಅಂಥವರೇ ರಾಜ ಮತ್ತು ಮಂತ್ರಿಗಳಾಗಲು ಅರ್ಹರು. ಇರಲಿ, ನಾನೀಗ ನಿಮಗಿಬ್ಬರೂ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ನೀವು ಸರಿಯಾದ ಉತ್ತರಗಳನ್ನು ಕೊಟ್ಟರೆ, ನನ್ನ ಗೌರವಕ್ಕೆ ಅರ್ಹರಾಗುತ್ತೀರಿ. ಇಲ್ಲದೇ ಹೋದರೆ, ನನಗೆ ನಿಮ್ಮಗಳ ದೆಸೆಯಿಂದ ಭಾರೀ ಭೋಜನವಾಗುತ್ತದೆ. ಏನು ಹೇಳುತ್ತೀರಿ?''

ಹೀಗೆ ಎಚ್ಚರಿಸಿ ಕರ್ಕಟಿಯು ಅವರಿಗೆ ಹಲವು ಪ್ರಶ್ನೆಗಳನ್ನು ಕೇಳಿದಳು. ಅವುಗಳಲ್ಲಿ ಮೂರು ಪ್ರಧಾನ ಪ್ರಶ್ನೆಗಳಿವು: ೧. ಈ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಲಯಕ್ಕೆ ಕಾರಣೀಭೂತವಾದ ಮೂಲ ವಸ್ತು ಯಾವುದು? ೨. ಎಲ್ಲ ಕಡೆ ಚೈತನ್ಯರೂಪದಲ್ಲಿ ಬೆಳಗುತ್ತಿರುವುದು ಯಾವುದು? ೩. ಬೀಜವು ಮರವನ್ನು ಅಡಗಿಸಿಕೊಂಡಿರುವ ಹಾಗೆ ಈ ಸೃಷ್ಟಿಯನ್ನು, ಹುದುಗಿಸಿಕೊಂಡಿರುವ ಮೂಲವಸ್ತು ಯಾವುದು?

ಅದಕ್ಕೆ ಮಂತ್ರಿಯು ಹೀಗೆ ಉತ್ತರಿಸಿದನು: ''ಓ ರಾಕ್ಷಸಿ, ನಿನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರ ಒಂದೇ. ಅದೇ ಅದ್ವಯ ಪರಬ್ರಹ್ಮ. ಅದು ಮನಸ್ಸಿಗೆ, ಐದು ಇಂದ್ರಿಯಗಳಿಗೆ ಅತೀತವಾದುದು; ಆಕಾಶಕ್ಕಿಂತ ಸೂಕ್ಷ್ಮವಾದುದು; ಅಣುವಿಗೂ ಅಣುವಾದದ್ದು; ಮಹತ್ತಿಗೂ ಮಹತ್ತಾದದ್ದು. ಅದು ಅಪ್ರಮೇಯವಾದ ಜ್ಞಾನ ಸ್ವರೂಪವೇ ಸರಿ. ಈ ಬ್ರಹ್ಮವು ಸರ್ವವ್ಯಾಪಿ. ಇದಕ್ಕೆ ಯಾವ ಆಲಂಬನೆಯೂ ಬೇಕಾಗಿಲ್ಲ. ಅದು ಸ್ವಪ್ರಕಾಶಕ. ತನಗೆ ತಾನೇ, ತನ್ನ ಚೈತನ್ಯದ ಬೆಳಕಿನಲ್ಲಿಯೇ ಬೆಳಗಿಕೊಂಡಿರುತ್ತದೆ. ಅದು ಅನಂತವಾದುದು; ಅದೃಶ್ಯವಾದುದು. ಅದಕ್ಕೆ ನೆಲೆಯೆಂಬುದಿಲ್ಲ. ಅದು ಎಲ್ಲ ಜೀವಿಗಳಲ್ಲಿಯೂ ಅವರವರ ಆತ್ಮರೂಪದಲ್ಲಿ ಅಡಗಿರುತ್ತದೆ. ಬ್ರಹ್ಮವು ನಿರಪೇಕ್ಷವಾದ ಚಿದ್ವಸ್ತು. ಎಲ್ಲ ಜ್ಯೋತಿಗಳಿಗೂ ಜ್ಯೋತಿಯನ್ನು ನೀಡುವ ಆತ್ಮಜ್ಯೋತಿಯೇ ಅದು. ಅಂತಹ ಬ್ರಹ್ಮವೇ ಕಲ್ಲು, ಮಣ್ಣು, ಭೂಮಿ ಮೊದಲಾದ ಹಲವಾರು ಪ್ರಭೇದಗಳಲ್ಲಿ, ಚರವಾಗಿಯೂ ಅಚರವಾಗಿಯೂ ಅಭಿವ್ಯಕ್ತಗೊಂಡಿದೆ. ಅದರಲ್ಲಿ ಎರಡು ಅಂಶಗಳಿವೆ. ಒಂದು ಚೈತನ್ಯ, ಇನ್ನೊಂದು ಜಡ. ಎರಡೂ ಬ್ರಹ್ಮವೇ. ಬ್ರಹ್ಮವೇ ಎಲ್ಲವನ್ನೂ ಅಡಗಿಸಿಕೊಂಡಿರುವ

ಮೂಲವಸ್ತು. ಈ ಅನೇಕಾನೇಕ ಪ್ರಪಂಚಗಳು ಬ್ರಹ್ಮನಿಗಿಂತ ಅಭಿನ್ನವಾದುವು. ಸಮುದ್ರದ ಮೇಲಿನ ಗುಳ್ಳೆಗಳಂತೆ ಅವು ಬ್ರಹ್ಮನಿಂದ ಸೃಷ್ಟಿಯಾಗಿ, ಬ್ರಹ್ಮನಲ್ಲಿಯೇ ವಿಲೀನಹೊಂದುತ್ತವೆ.''

ಈ ಮಾತುಗಳನ್ನು ಕೇಳಿ ಕರ್ಕಟಿ ತುಂಬ ಸಂತೋಷಪಟ್ಟಳು. ಆಕೆ ರಾಜನ ಜ್ಞಾನದ ಮಟ್ಟವನ್ನು ಪರೀಕ್ಷಿಸಲು ಇಚ್ಛಿಸಿದಳು.

ಇದಕ್ಕೆ ರಾಜ ಹೀಗೆಂದ: ''ಓ ರಾಕ್ಷಸಿ, ಇರುವುದು ಬ್ರಹ್ಮತತ್ತ್ವವೊಂದೇ. ಈ ವೈವಿಧ್ಯಮಯ ಜಗತ್ತಿಗೆ ಅಸ್ತಿತ್ವವೆನ್ನುವುದೇ ಇಲ್ಲ. ನಮ್ಮ ಮನಸ್ಸಿನ ಸಂಕಲ್ಪದ ಹಾಗೆ ಈ ಜಗತ್ತು ನಮಗೆ ತೋರಿ ಬರುತ್ತದೆ. ನಮ್ಮ ಮನಸ್ಸಿನಲ್ಲಿ ಏಳುವ ಸಂಕಲ್ಪಗಳನ್ನು ನಾಶ ಮಾಡಿಕೊಳ್ಳಲು ಸಾಧ್ಯವಾದರೆ, ನಮ್ಮ ಪಾಲಿಗೆ ಜಗತ್ತೂ ನಾಶವಾಗುವುದು. ಅಜ್ಞಾನವೇ ಸಂಸಾರಚಕ್ರ ಉರುಳುತ್ತಿರುವುದಕ್ಕೆ ಕಾರಣ. ಓ ಕರ್ಕಟಿ, ನಿನ್ನ ಪ್ರಶ್ನೆಗಳಲ್ಲೆಲ್ಲ ನೀನು ಸೂಚಿಸಿರುವುದು ಬ್ರಹ್ಮತತ್ತ್ವವನ್ನು ಮಾತ್ರವೇ. ಆ ಬ್ರಹ್ಮತತ್ತ್ವವೇ ಈ ಜಗತ್ತಿನ ಹಾಗೆ ಕಾಣಿಸಿಕೊಳ್ಳುತ್ತಿರುವುದು. ಹಾಗಿದ್ದರೂ ಅದು ತನ್ನ ಅದ್ವಯ, ಅನಂತ, ಸರ್ವವ್ಯಾಪಿ, ಸ್ವಪ್ರಕಾಶ ರೂಪವನ್ನು ಬಿಟ್ಟುಕೊಡುವುದಿಲ್ಲ. ಬ್ರಹ್ಮವೆಂದರೆ ಏನೆಂದು ಕೊಂಡಿರುವೆ? ಅದು 'ಸತ್' ಸ್ವರೂಪವಾದುದು. ಅಂದರೆ 'ಅಸ್ತಿತ್ವ' ಮಾತ್ರವೇ. ಇಡೀ ಜಗತ್ತು ಮೂಡಿಬಂದಿರುವುದು ಈ ಸದ್ವಸ್ತುವಿನಿಂದಲೇ. ಪ್ರಳಯಕಾಲದಲ್ಲಿ ಅದು ವಿಲೀನವಾಗುವುದೂ ಇದರಲ್ಲಿಯೇ. ಇಂಥ ಬ್ರಹ್ಮವಸ್ತುವನ್ನು ಶುದ್ಧ ಮನಸ್ಸಿನಿಂದ ಮಾತ್ರವೇ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯ. ನಮ್ಮ ಮನಸ್ಸಿನಲ್ಲಿ ನೆಲೆ ನಿಂತಿರುವ ಸಂಕಲ್ಪ-ವಿಕಲ್ಪಗಳನ್ನು (ಸಂಕಲ್ಪವೆಂದರೆ, 'ನಾನು ಹೀಗೆ ಮಾಡುತ್ತೇನೆ, ಹಾಗೆ ಮಾಡುತ್ತೇನೆ' ಎನ್ನುವ ಭಾವನೆ; ವಿಕಲ್ಪ ಅದಕ್ಕೆ ವಿರುದ್ಧವಾದುದು) ಕಳೆದುಕೊಂಡಾಗ ಮಾತ್ರ ಮನಸ್ಸು ಶುದ್ಧವಾಗುವುದು.''

ರಾಜನ ಈ ಮಾತುಗಳನ್ನು ಕೇಳಿ ಕರ್ಕಟಿಗೆ ಮಹದಾನಂದವಾಯಿತು. ಅವಳು ಹೇಳಿದಳು: ''ಓ ರಾಜ, ನೀನು ಮತ್ತು ನಿನ್ನ ಮಂತ್ರಿ - ಇಬ್ಬರೂ ನಿಜವಾದ ಋಷಿಗಳೇ ಸರಿ. ನೀವು ಜಗದ್ವಂದ್ಯರು. ಇಬ್ಬರೂ ಜ್ಞಾನಸೂರ್ಯನಂತೆ ಬೆಳಗುತ್ತಿದ್ದೀರಿ. ನಿಮ್ಮ ಅರಿವಿನ ಮಾತುಗಳು ನನ್ನ ಕಿವಿಗೆ ಅಮೃತಪ್ರಾಯವಾಗಿದ್ದವು. ಅದರಿಂದಾಗಿ ನನ್ನ ದೇಹವು ಶಾಂತಸ್ಥಿತಿಯಲ್ಲಿದೆ. ಹೀಗೆ ಜ್ಞಾನಿಗಳ ಸಹವಾಸವನ್ನು ಮಾಡಿದವರು ನಿಜಕ್ಕೂ ಧನ್ಯರೇ. ಎಲ್ಲ ಜನರೂ ನಿಮ್ಮ ಪಾದಗಳನ್ನು ಶಿರದಲ್ಲಿ ಧಾರಣೆ ಮಾಡಬೇಕು. ಓ ರಾಜನೇ, ನಾನು ನಿನಗೆ ಯಾವ ರೀತಿ ಸೇವೆ ಸಲ್ಲಿಸಲಿ? ದಯವಿಟ್ಟು ಆಜ್ಞೆ ಮಾಡು.''

ಆಗ ರಾಜನು ಹೇಳಿದನು: ''ಓ ಕರ್ಕಟಿ, ಆಹಾರಕ್ಕಾಗಿ ಇನ್ನು ಮುಂದೆ ಯಾವ ಮಾನವಜೀವಿಯನ್ನೂ ಕೊಲ್ಲಬೇಡ. ಅಲ್ಲದೆ ಯಾವ ಜೀವಿಯನ್ನೂ ಹಿಂಸೆಗೆ ಒಳಪಡಿಸಬೇಡ.''

ಇದಕ್ಕೆ ಕರ್ಕಟಿಯು ತಲೆಬಾಗಿ ನುಡಿದಳು: ''ಓ ಪ್ರಭುವೇ, ನಿನ್ನ ಆಣತಿಯಂತೆಯೇ ಆಗಲಿ. ನಾನು ಸತ್ಯವನ್ನೇ ಹೇಳುತ್ತೇನೆ. ಭವಿಷ್ಯದಲ್ಲಿ ನಾನು ಯಾರನ್ನೂ ಕೊಲ್ಲುವುದಿಲ್ಲ.''

ಆಗ ರಾಜನೆಂದ, ''ಹಾಗಾದರೆ ಹೇಗೆ ತಾನೇ ನೀನು ಜೀವಿಸುವೆ? ನೀನು ಪ್ರಾಣಿಗಳ ಮಾಂಸದ ಮೇಲೆಯೇ ಜೀವಿಸುವವಳಲ್ಲವೆ?''

ಕರ್ಕಟಿ ವಿನಯದಿಂದ ಉತ್ತರಿಸಿದಳು: ''ನಾನು ಮತ್ತೊಮ್ಮೆ ಹಿಮಾಲಯದ ಶಿಖರದಲ್ಲಿ ಏಕಾಂತವಾಸ ಮಾಡುತ್ತೇನೆ. ನಿರ್ವಿಕಲ್ಪ ಸಮಾಧಿಯನ್ನು ಬಹುಕಾಲ ಅಭ್ಯಾಸ ಮಾಡುತ್ತೇನೆ. ಅದರ ಆನಂದಾಮೃತವನ್ನು ಸವಿಯುತ್ತೇನೆ. ನಂತರ ನಾನು ಈ ದೇಹವನ್ನು ತ್ಯಾಗ ಮಾಡಿ ವಿದೇಹಮುಕ್ತಿಯನ್ನು ಪಡೆಯುತ್ತೇನೆ. ಓ ರಾಜ, ಇಂದಿನಿಂದ ನನ್ನ ದೇಹವು ಬಿದ್ದುಹೋಗುವವರೆಗೂ ನಾನು ಯಾವ ಜೀವಿಯನ್ನೂ ಕೊಲ್ಲುವುದಿಲ್ಲ ಮಾತ್ರವಲ್ಲ , ಹಿಂಸಿಸುವುದೂ ಇಲ್ಲ. ಈ ವಿಷಯದಲ್ಲಿ ನೀನು ನನ್ನ ಮಾತನ್ನು ಪೂರ್ತಿಯಾಗಿ ನಂಬಬಹುದು.''

ರಾಜನು ಹೇಳಿದನು: ''ಕರ್ಕಟಿ, ದಯವಿಟ್ಟು ನೀನು ನನ್ನ ಅರಮನೆಗೆ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸು.'' ಅದಕ್ಕೆ ಕರ್ಕಟಿಯು ಒಪ್ಪಿಕೊಂಡಳು. ಅವಳು ಲಕ್ಷ್ಮಿಯಂತೆ ಸುಂದರವಾದ ರೂಪವನ್ನು ಧರಿಸಿದಳು. ರಾಜ ಮತ್ತು ಮಂತ್ರಿಯರೊಡನೆ ಆಕೆ ಅರಮನೆಗೆ ತೆರಳಿದಳು. ಅಲ್ಲಿನ ಆಹಾರವನ್ನು ಸ್ವೀಕರಿಸಿ ತನ್ನ ಹಸಿವೆಯನ್ನು ಇಂಗಿಸಿಕೊಂಡಳು. ನಂತರ ಹಿಮಾಲಯಕ್ಕೆ ತೆರಳಿ, ಅಲ್ಲಿ ಸಮಾಧಿಭಾವದಲ್ಲಿ ನೆಲೆನಿಂತು ತಪಸ್ಸು ಮಾಡಿದಳು. ನಾಲ್ಕು ವರ್ಷಗಳ ಕಾಲ ಅವಳು ಸತತವಾಗಿ ಆ ಸ್ಥಿತಿಯಲ್ಲಿ ಇರುತ್ತಿದ್ದಳು. ಒಮ್ಮೆ ಏಳು ವರ್ಷಗಳ ಕಾಲ ಸಮಾಧಿಯಲ್ಲಿಯೇ ಮುಳುಗಿಬಿಟ್ಟಿದ್ದಳು. ಆ ಬಳಿಕವೂ ಮಧ್ಯೆ ಮಧ್ಯೆ ಅರಮನೆಗೆ ಬಂದು ರಾಜ ಮತ್ತು ಮಂತ್ರಿಯರೊಡನೆ ಸತ್ಸಂಗದಲ್ಲಿ ಕಾಲ ಕಳೆಯತೊಡಗಿದಳು. ಮುಂದಿನ ದಿನಗಳಲ್ಲಿ ಕರ್ಕಟಿ ಮತ್ತು ರಾಜ ಇಬ್ಬರೂ ಪರಸ್ಪರ ಸ್ನೇಹ ಭಾವದಿಂದ ನಡೆದುಕೊಂಡರು.

ನೋಡಿದರಾ, ಜಾತಿ ಮತ ಭೇದವಿಲ್ಲದೆ ಒಬ್ಬ ರಾಕ್ಷಸಿ, ಒಬ್ಬ ಬೇಟೆಗಾರ ರಾಜ ಮತ್ತು ಅವನ ಮಂತ್ರಿ ಕೂಡ ಜ್ಞಾನಿಗಳಾಗಲು ಸಾಧ್ಯ ಎಂಬುದನ್ನು ಯೋಗವಾಸಿಷ್ಠವು ತೋರಿಸಿಕೊಡುತ್ತದೆ! ಇದು ನಿಜಕ್ಕೂ ಅದ್ಭುತವಲ್ಲವೆ?! ✷

**ಮನುಷ್ಯರ ಬುದ್ಧಿ ಎಷ್ಟರಮಟ್ಟಿನದು? ಏನು ಕೇಳಬೇಕಾಗಿದೆಯೋ ಅದರ ಬದಲು ಇನ್ನೇನನ್ನೋ ಕೇಳುತ್ತಾನೆ. ಶಿವನ ಮೂರ್ತಿ ಮಾಡಲು ಹೋಗಿ ಮಂಗನ ಮೂರ್ತಿ ಮಾಡಿದಂತೆ. ಭಗವಂತನಲ್ಲಿ ಶರಣಾದರೆ ಒಳ್ಳೆಯದು. ಯಾವಾಗ ಏನು ಅಗತ್ಯವೋ ಅದನ್ನೆಲ್ಲ ಅವನೇ ಕೊಡುತ್ತಾನೆ. ಆದರೂ ಭಕ್ತಿಗಾಗಿ ಮತ್ತು ಮನಸ್ಸಿನಲ್ಲಿ ಆಸೆಗಳಿಲ್ಲದಂತಾಗಲು ಪ್ರಾರ್ಥಿಸಬೇಕು. ಈ ಬಯಕೆಗಳು ಇತರ ಬಯಕೆಗಳ ಸಾಲಿಗೆ ಸೇರುವುದಿಲ್ಲ.**

-ಶ್ರೀಮಾತೆ ಶಾರದಾದೇವಿ

ಶ್ರೀ ಆದಿಶಂಕರಾಚಾರ್ಯ ವಿರಚಿತ

## ಸೌಂದರ್ಯಲಹರೀ

(ಭಾವಲಹರೀ)

**ಲೇಖಕರು: ಶ್ರೀಮತಿ ಹೆಚ್.ಎಲ್. ಸೀತಾದೇವಿ.**
**ಪ್ರಕಾಶಕರು:** ನವಭಾರತೀ ಪ್ರಕಾಶನ,
ಸರಸ್ವತಿಪುರಂ, ಮೈಸೂರು – ೫೭೦೦೦೯
ಪುಟಗಳು : ೧೬+೧೮೬ ಬೆಲೆ : ೧೨೦



ಸ್ತೋತ್ರಗ್ರಂಥಗಳಲ್ಲಿ ಅತ್ಯಂತ ಮಹತ್ವವುಳ್ಳ 'ಸೌಂದರ್ಯ ಲಹರಿ'ಯು ಶ್ರೀಮಚ್ಛಂಕರಭಗವತ್ಪಾದರಿಂದ ರಚಿಸಲ್ಪಟ್ಟಿದೆ. ಈ ಸ್ತೋತ್ರಗಳಲ್ಲಿ ಜಗಜ್ಜನನಿಯ ಸೌಂದರ್ಯ ಹಾಗೂ ಮಹಿಮಾನುವರ್ಣನೆಗಳನ್ನು ಮಾಡಿರುವುದಲ್ಲದೆ, ಮಂತ್ರ ಹಾಗೂ ತಂತ್ರಶಾಸ್ತ್ರದ ಅನೇಕ ವಿಷಯಗಳನ್ನು ಶ್ರೀಶಂಕರರು ತಿಳಿಸಿದ್ದಾರೆ.

ಈಗೀಗ 'ಸೌಂದರ್ಯಲಹರೀ' ಸ್ತೋತ್ರಗಳನ್ನು ಅನೇಕರು ಕಲಿತು ಬಾಯಿಪಾಠ ಮಾಡಿರುವುದಲ್ಲದೆ, ಶ್ರೀ ಶಂಕರ ಸ್ತೋತ್ರ ಪಾರಾಯಣದ ಸತ್ರದ ಅಂಗವಾಗಿ ಅನೇಕ ಅಭಿಯಾನಗಳೂ ನಡೆದಿವೆ. ಸತ್ಸಂಗಗಳಲ್ಲಂತೂ ನಿತ್ಯ ಪಾರಾಯಣವಾಗುತ್ತಿವೆ. ಆದರೆ ಪಾರಾಯಣ ಮಾಡುವಾಗ ಸ್ತೋತ್ರದ ಅರ್ಥ, ಭಾವಾರ್ಥ, ಪಠಣದ ಫಲಿತಾಂಶ ತಿಳಿದು ಮಾಡಿದರೆ ಹೆಚ್ಚು ಫಲ ಹಾಗೂ ಧನ್ಯತೆ ಉಂಟಾಗುತ್ತದೆ. ಈ ದಿಸೆಯಲ್ಲಿ ಲೇಖಕಿ ಸ್ತೋತ್ರಗಳ ಪ್ರತಿಪದಾರ್ಥ, ಭಾವಾರ್ಥ, ಟಿಪ್ಪಣಿಗಳನ್ನು ಬರೆದು ಪ್ರಕಟಿಸಿದ್ದಾರೆ. ನಿಜಕ್ಕೂ ಇದು ಅಭಿನಂದನೀಯವಾದ ಕಾರ್ಯ.

'ಸೌಂದರ್ಯ ಲಹರಿ'ಯ ಅನೇಕ ಅನುವಾದಗಳು ಈಗಾಗಲೇ ಕನ್ನಡದಲ್ಲಿ ಪ್ರಕಟವಾಗಿವೆ. ಆದರೆ ಲೇಖಕಿಯು ತಮ್ಮ ಗಂಭೀರ, ಸುಲಲಿತವಾದ, ವಿದ್ವತ್ಪೂರ್ಣವಾದ ಶೈಲಿಯಿಂದ, ಅನ್ವಯಾರ್ಥ ಪೂರ್ವಕವಾದ ತಾತ್ಪರ್ಯವನ್ನು ಬರೆದು, ಓದುವವರಿಗೂ, ಪಾರಾಯಣ ಮಾಡುವವರಿಗೂ, ಒಂದು ಕೈದೀವಿಗೆಯನ್ನು ಕೊಟ್ಟಿದ್ದಾರೆ. ಬಹಳ ಶ್ರಮಪಟ್ಟು ಈ ಹೊತ್ತಿಗೆಯನ್ನು ಬರೆದು ಪ್ರಕಟಿಸಿದ ಲೇಖಕಿಯವರಿಗೆ ಹೃತ್ಪೂರ್ವಕ ಧನ್ಯವಾದಗಳು.

ಶ್ರೀದೇವಿಯ ಹಾಗೂ ಶ್ರೀಶಂಕರರ ಕೃಪಾಶೀರ್ವಾದಗಳು ಇವರಿಗೆ ಸಲ್ಲಲಿ ಎಂಬುದೇ ನಮ್ಮ ಆಶಯ.

*– ಉಷಾ*

# ಭಕ್ತನಿಗಾಗಿ ಪ್ರಭು ದ್ವಾರಪಾಲಕನಾದ

'ತಾಯಿ ತನ್ನ ಅಸಹಾಯಕ ಶಿಶುವನ್ನು ರಕ್ಷಿಸುವಂತೆ ಭಗವಂತನು ತನ್ನ ಭಕ್ತರನ್ನು ರಕ್ಷಿಸುತ್ತಾನೆ' ಎನ್ನುತ್ತದೆ ತುಲಸೀ ರಾಮಾಯಣ.

ಬಿಹಾರಿನ ಪಶ್ಚಿಮ ಚಂಪಾರಣ ಭಾಗದಲ್ಲಿ ಬೊತಿಯಾ ರಾಜ್ಯದ ರಾಜ ತೀರಿಕೊಂಡಾಗ, ಕೋರ್ಟ್ ಆಫ್ ವಾರ್ಡ್ ನಿಯಮದಂತೆ ಬ್ರಿಟಿಷರು ಅದನ್ನು ವಶಪಡಿಸಿಕೊಂಡರು. ಅಲ್ಲಿ ವಿ.ಇರಿನ್‌ನನ್ನು ಮ್ಯಾನೇಜರ್‌ನನನಾಗಿ ನೇಮಿಸಿದರು. ಅವನು ಬೋತಿಯಾದ ವಿಧವೆ ರಾಣಿಗೆ ಬುದ್ಧಿ ಭ್ರಮಣೆಯಾಗಿದೆಯೆಂದು ತೋರಿಸಿ, ಅವಳ ಅಧಿಕಾರವನ್ನು ವಶಪಡಿಸಿಕೊಂಡನು. ಆಗ ಶಿವಧಾರಿ ಮಿತ್ರ ಎಂಬಾತ ಅರಮನೆಯ ದ್ವಾರಪಾಲಕನಾಗಿದ್ದನು. ರಾತ್ರಿಯಿಡೀ ಕಾಯುವ ಕೆಲಸ ಅವನದಾಗಿತ್ತು. ಅವನೊಬ್ಬ ರಾಮಭಕ್ತ. ಊರಿನಲ್ಲಿ ಎಲ್ಲಿಯೇ ಶ್ರೀರಾಮನ ಭಜನೆ-ಕೀರ್ತನೆ ನಡೆದರೂ ಅವನು ಅಲ್ಲಿಗೆ ಹೋಗಿ ಭಾಗವಹಿಸುತ್ತಿದ್ದನು. ಕೆಲವರಿಗೆ ಅದನ್ನು ಕಂಡು ಸಹಿಸಲಾಗಲಿಲ್ಲ. ಅವರು ಅವನ ಮೇಲೆ ಮ್ಯಾನೇಜರ್ ಬಳಿ ದೂರಿತ್ತರು.

ಮ್ಯಾನೇಜರ್ ಒಂದು ರಾತ್ರಿ ದೂರನ್ನು ಪರೀಕ್ಷಿಸಲು ತಾನೇ ಹೋದನು. ಅವನೊಂದಿಗೆ ದೂರನ್ನು ನೀಡಿದ ವ್ಯಕ್ತಿಯೂ ಇದ್ದನು. ನೋಡಿದರೆ, ಮಿಶ್ರಾ ದ್ವಾರದಲ್ಲಿ ಕಾವಲು ಕಾಯುತ್ತ ಎಚ್ಚರವಾಗಿದ್ದನು. ಆಗ ದೂರು ತಂದ ವ್ಯಕ್ತಿ. ''ಇಲ್ಲ ಮಹಾಶಯರೇ, ಅವನು ಇಂತಹ ಕಡೆಯಲ್ಲಿ ಕೀರ್ತನೆಯಲ್ಲಿ ತೊಡಗಿದ್ದಾನೆ'' ಎಂದನು. ಆಗ ಅವರಿಬ್ಬರೂ ಅಲ್ಲಿಗೆ ಹೋಗಿ ನೋಡಿದಾಗ, ಅಲ್ಲಿ ಶಿವಧಾರಿ ಮಿತ್ರ ತನ್ಮಯನಾಗಿ ಕೀರ್ತನೆಯಲ್ಲಿ ತೊಡಗಿದ್ದನು. ಅದನ್ನು ನೋಡಿ ಮ್ಯಾನೇಜರ್‌ನಿಗೆ ಆಶ್ಚರ್ಯವಾಯಿತು. ಅವನಿಗೆ ಗೊತ್ತಾಯಿತು, ದ್ವಾರಪಾಲಕನ ಕೆಲಸ ಮಾಡುತ್ತಿದ್ದವನು ಸ್ವಯಂ ರಾಮನೇ ಎಂದು.

ಮಿಶ್ರಾಗೆ ತನ್ನ ಕೆಲಸವನ್ನು ರಾಮನೇ ಮಾಡುತ್ತಿದ್ದಾನೆಂದು ತಿಳಿದಾಗ ಅವನು ಅಳತೊಡಗಿದನು. ನನ್ನಿಂದಾಗಿ ರಾಮನಿಗೆ ಅದೆಷ್ಟು ತೊಂದರೆಯಾಯಿತೆಂದು ದುಃಖದಿಂದ ಅವನು ತನ್ನ ಕೆಲಸಕ್ಕೆ ರಾಜೀನಾಮೆ ನೀಡಿದನು. ಮ್ಯಾನೇಜರ್ ಅವನ ರಾಜೀನಾಮೆಯನ್ನು ಸ್ವೀಕರಿಸದೆ, ಅವನಿಗೆ ಕೀರ್ತನೆಗೆ ಹೋಗಿ ಬರಲು ಒಂದು ಗಾಡಿಯನ್ನು ಉಚಿತವಾಗಿ ನೀಡಿ, ಕೆಲಸ ಮಾಡದಿದ್ದರೂ ವೇತನ ನೀಡುತ್ತಿದ್ದನು.

ಅವನು ದುಡಿಯುತ್ತಿದ್ದಾಗ ಇದೇ ರೀತಿ ಮುಂದುವರಿಯಿತು. ನಿವೃತ್ತನಾದ ಮೇಲೂ ಅವನು ಸದಾ ಕೀರ್ತನೆಯಲ್ಲಿ ಮೈಮರೆಯುತ್ತಿದ್ದನು. ಅವನು ಇತ್ತೀಚೆಗೆ ಮೃತನಾದನು. ನಾನು ಅವನನ್ನು ನೋಡಿದ್ದೇನೆ. ಇಂತಹ ಭಕ್ತರನ್ನೇ ಉದ್ದೇಶಿಸಿ ಭಗವಂತ 'ಯೋಗಕ್ಷೇಮಂ ವಹಾಮ್ಯಹಮ್' ಎಂದಿದ್ದಾನೆ. ಪುರಾಣಕಾಲದಲ್ಲಿ ಭಗವಂತ ಪಾತಾಳ ಲೋಕದಲ್ಲಿ ಬಲಿಯ ಬಾಗಿಲನ್ನು ಕಾದಂತೆ, ಇಂದಿಗೂ, ಮುಂದೆಯೂ ತನ್ನಲ್ಲಿ ಅನುರಕ್ತರಾದ, ಶರಣಾಗತ ಭಕ್ತರಿಗಾಗಿ ಅವರ ದ್ವಾರಪಾಲಕನಾಗುವುದಷ್ಟೇ ಅಲ್ಲ, ಇನ್ನೇನೂ ಬೇಕಿದ್ದರೂ ಮಾಡಲು ಸಿದ್ಧ. ✷

*ಜನಾರ್ದನ ಪಾಂಡೇಯ ಮಿಶ್ರ, 'ಕಲ್ಯಾಣ', ಏಪ್ರಿಲ್ ೨೦೧೩*
*ಅನುವಾದ: ಮಾತಾ ತ್ಯಾಗಮಯೀ*

# ಪಾಂಡುರಂಗನ ಭಕ್ತೆ ಗೋಮಾಬಾಯಿ

**ಕಥೆ: ಎಂ. ಜಯಶ್ರೀ**

ಚಿತ್ರ : **ಶಂಕರ್**

**1** ಗೋಮಾಬಾಯಿ ಪಂಡರಾಪುರದ ದೇವತೆಯಾದ ಭಗವಾನ್ ಪಾಂಡುರಂಗನ ಭಕ್ತೆ. ಸಣ್ಣ ವಯಸ್ಸಿನಲ್ಲೇ ಅವಳು ತನ್ನ ತಾಯಿತಂದೆಯರನ್ನು ಕಳೆದುಕೊಂಡಳು.

ವಿವಾಹವಾದ ಸ್ವಲ್ಪ ಸಮಯದ ಬಳಿಕ ಅವಳು ತನ್ನ ಪತಿಯನ್ನೂ ಕಳೆದುಕೊಂಡಳು.



ಓ, ಪಾಂಡುರಂಗ! ಪಂಡರಾಪುರದಲ್ಲಿ ಏಕಾದಶಿ ಉಪವಾಸ ವ್ರತವನ್ನು ಮಾಡಬೇಕೆಂದು ನನ್ನಾಸೆ. ಅದಕ್ಕೆ ನಿನ್ನ ಅನುಗ್ರಹವುಂಟಾಗಬೇಕು. ದಯವಿಟ್ಟು ನನ್ನನ್ನು ಹರಸು.

**2** ಅವಳ ಬಳಿ ಸ್ವಲ್ಪ ಗೋಧಿಹಿಟ್ಟು ಮಾತ್ರವೇ ಇತ್ತು. ಅದರೊಂದಿಗೆ ಆಕೆ ಪಂಡರಾಪುರಕ್ಕೆ ಹೊರಟಳು. ದಾರಿಯಲ್ಲಿ ಅವಳು ಭೀಮಾನದಿಯನ್ನು ದಾಟಬೇಕಾಗಿ ಬಂತು.

ಓ ಅಂಬಿಗ ! ಪಾಂಡುರಂಗನ ದರ್ಶನ ಪಡೆಯಲು ನಾನು ಪಂಡರಾಪುರಕ್ಕೆ ಹೋಗಬೇಕೆಂದಿದ್ದೇನೆ.
ಆದರೆ ದೋಣಿಯ ಶುಲ್ಕ ನೀಡಲು ನನ್ನ ಬಳಿ ಹಣವಿಲ್ಲ. ನನ್ನಲ್ಲಿ ಒಂದಿಷ್ಟು ಗೋಧಿ ಹಿಟ್ಟು ಇದೆ.
ಅದನ್ನು ನಿನಗೆ ಕೊಡುತ್ತೇನೆ. ದಯವಿಟ್ಟು ನದಿ ದಾಟಿಸು!



(ಕೋಪದಿಂದ) ಹಣವಿಲ್ಲದಿದ್ದರೆ ಪಂಡರಾಪುರಕ್ಕೆ ನೀನೇಕೆ ಹೊರಟು ನಿಂತೆ? ಒಂದಿಷ್ಟು ಗೋಧಿ ಹಿಟ್ಟು ನೀಡಿದ ಮಾತ್ರಕ್ಕೆ ನದಿ ದಾಟಬಹುದು ಅಂತ ಅಂದುಕೊಂಡೆಯಾ?

**3** ಗೋಮಾಬಾಯಿ ಕಂಬನಿದುಂಬಿ ಅಂಬಿಗನನ್ನು ಕೇಳಿಕೊಂಡಳು.

ನಾನು ಬಹಳ ಬಡವಿ, ಸ್ವಾಮಿ. ನಿಜವಾಗಿಯೂ ನನ್ನ ಬಳಿ ಹಣವಿಲ್ಲ. ದಯವಿಟ್ಟು ನನಗೆ ಸಹಾಯಮಾಡಿ. ನಾನು ಪಾಂಡುರಂಗನ ದರ್ಶನ ಪಡೆಯುವಂತೆ ಮಾಡು ಅದರಿಂದ ನಿನಗೂ ಪುಣ್ಯ ಲಭಿಸುವುದು.



ಏನಮ್ಮಾ ! ನನಗೆ ಈಗಾಗಲೇ ಬೇಕಾದಷ್ಟು ಪುಣ್ಯ ಲಭಿಸಿದೆ. ಅದೇ ನನಗೆ ಸಾಕು. ಇಲ್ಲಿಂದ ಹೊರಟುಹೋಗು.

**4** ಕೋಪದಿಂದ ಅಂಬಿಗ ಗೋಮಾಬಾಯಿಯನ್ನು ನದಿಗೆ ತಳ್ಳಿದ. ಅವಳು ಅಳುತ್ತ ಪಾಂಡುರಂಗನನ್ನು ಪ್ರಾರ್ಥಿಸಿದಳು.




**5** ಪರಂಧಾಮನೂ, ಜನನಮರಣಗಳಿಂದ ಕೂಡಿದ ಸಂಸಾರಸಾಗರದಿಂದ ಮಾನವನನ್ನು ಉದ್ಧರಿಸುವವನೂ ಆದ ದೇವರು ಒಬ್ಬ ಅಂಬಿಗನ ವೇಷದಲ್ಲಿ ಅವಳ ಮುಂದೆ ಕಾಣಿಸಿಕೊಂಡ.

**6** ಗೋಮಾಬಾಯಿಗೆ ತನ್ನ ಮುಂದೆ ಕಾಣಿಸಿಕೊಂಡ ಇನ್ನೊಬ್ಬ ಅಂಬಿಗ ಸಾಕ್ಷಾತ್ ಪಾಂಡುರಂಗನೇ ಎಂಬುದು ಗೊತ್ತಾಗಲಿಲ್ಲ.




**7** ಅಂಬಿಗನಾಗಿ ಕಾಣಿಸಿಕೊಂಡ ದೇವರು ಅವಳನ್ನು ನದಿ ದಾಟಿಸಿದ.




**8** ಮುಂಜಾನೆಯ ನಸುಕಿನ ವೇಳೆ ಪಾಂಡುರಂಗನು ಗೋಮಾಬಾಯಿಯನ್ನು ನದಿಯ ಇನ್ನೊಂದು ದಡದಲ್ಲಿ ಇಳಿಸಿದ.

9 ದಡ ಸೇರಿದ ಗೋಮಾಬಾಯಿ ದೋಣಿಯಿಂದ ಇಳಿದಳು. ಕೃತಜ್ಞತೆ ಸಲ್ಲಿಸಲು ಅಂಬಿಗನತ್ತ ತಿರುಗಿ ನೋಡಿದರೆ, ಅಲ್ಲಿ ದೋಣಿಯೂ ಇರಲಿಲ್ಲ, ಅಂಬಿಗನೂ ಇರಲಿಲ್ಲ.

ಪಾಂಡುರಂಗ! ಇದೇನು ಮಾಯೆ ನಿನ್ನದು! ಅಂಬಿಗ ಹಾಗೂ ದೋಣಿ, ಎರಡೂ ಮಾಯವಾಗಿ ಬಿಟ್ಟವಲ್ಲ!

10 ಗೋಮಾಬಾಯಿ ಪಂಡರಾಪುರದಲ್ಲಿ ಪಾಂಡುರಂಗನ ದೇವಾಲಯವನ್ನು ಪ್ರವೇಶಿಸಿದಳು. ತನ್ನ ಮನದಣಿಯುವಂತೆ ಆಕೆ ಪಾಂಡುರಂಗನ ದರ್ಶನ ಪಡೆದಳು. ಏಕಾದಶಿ ದಿನದಂದು ಅವಳು ಭಜನೆಯ ಮೇಳದೊಂದಿಗೆ ಸೇರಿಕೊಂಡಳು. ಭಕ್ತಿಯ ಪ್ರವಾಹದಲ್ಲಿ ತೇಲಿಹೋದ ಅವಳು, ಸಂಪೂರ್ಣ ತನ್ನನ್ನೇ ಮರೆತಳು.

ಜೈ ಜೈ ವಿಠಲ!

ಜೈ ಪಂಡರೀನಾಥ!

ಜೈ ಪಾಂಡುರಂಗ!

11 ಮರುದಿನ, ದ್ವಾದಶಿಯ ದಿನ ಪ್ರಾತಃಕಾಲ ಮತ್ತೆ ಗೋಮಾಬಾಯಿ ಹೃದಯದುಂಬಿ ಪ್ರಾರ್ಥಿಸಿದಳು.

ಇಂದು ಮುಂಜಾನೆ ನಾನು ಯಾರೋ ಒಬ್ಬರಿಗೆ ದ್ವಾದಶಿಯ ಭಿಕ್ಷೆಯಾಗಿ ಗೋಧಿಹಿಟ್ಟನ್ನು ನೀಡಬೇಕಾಗಿದೆ. ಪಾಂಡುರಂಗ! ಆದರೆ ನನ್ನಿಂದ ಭಿಕ್ಷೆಯನ್ನು ಸ್ವೀಕರಿಸಬಲ್ಲವರು ಯಾರೂ ಇಲ್ಲಿಯವರೆಗೆ ನನಗೆ ಲಭಿಸಿಲ್ಲ. ಪಂಡರೀನಾಥ. ನನ್ನ ದ್ವಾದಶೀ ಭಿಕ್ಷೆಯನ್ನು ಸ್ವೀಕರಿಸುವ ಯಾರನ್ನಾದರೂ ನನ್ನ ಬಳಿಗೆ ಕಳುಹಿಸು. ನನ್ನ ಏಕಾದಶೀ ಉಪವಾಸ ವ್ರತ ವ್ಯರ್ಥವಾಗದಂತೆ ಮಾಡು.

12 ಹಿಂದೆ ಅಂಬಿಗನಾಗಿ ಗೋಮಾಬಾಯಿಯ ಬಳಿಗೆ ಬಂದಿದ್ದ ಪಾಂಡುರಂಗ, ಈಗ ವೈಷ್ಣವ ಭಕ್ತನಾಗಿ ಅವಳ ಮುಂದೆ ಕಾಣಿಸಿಕೊಂಡ.

ಅಮ್ಮಾ, ನಾನು ತುಂಬಾ ಹಸಿದಿದ್ದೇನೆ. ನನಗೆ ರೊಟ್ಟಿ ಮಾಡಿಕೊಡು!

**13** ಗೋಮಾಬಾಯಿ ಆನಂದದಿಂದ ರೊಟ್ಟಿ ತಯಾರಿಸಿ, ಅದನ್ನು ವೈಷ್ಣವ ಭಕ್ತನಿಗೆ ಬಡಿಸಿದಳು.

**14** ವೈಷ್ಣವ ಭಕ್ತನ ರೂಪದಲ್ಲಿ ಪಾಂಡುರಂಗನು ರೊಟ್ಟಿ ತಿನ್ನುತ್ತಿದ್ದಾಗ ಅಲ್ಲಿಗೆ ರುಕ್ಮಿಣಿ ಒಬ್ಬಾಕೆ ವೃದ್ಧೆಯ ವೇಷದಲ್ಲಿ ಅಲ್ಲಿಗೆ ಬಂದಳು...




**15** ಗೋಮಾಬಾಯಿ ನೀಡಿದ ರೊಟ್ಟಿಯನ್ನು ಆ ದಂಪತಿಗಳು ಆನಂದದಿಂದ ತಿಂದರು.

**16** ಅನಂತರ ಅವರಿಬ್ಬರೂ ಗೋಮಾಬಾಯಿಗೆ ತಮ್ಮ ನಿಜವಾದ ರೂಪವನ್ನು ತೋರಿಸಿದರು. ಅವರು ಭಗವಾನ್ ಪಾಂಡುರಂಗ ಹಾಗೂ ಅವನ ಪತ್ನಿ ದೇವಿ ರುಕ್ಮಿಣಿಯಾಗಿದ್ದರು.






## ಘಾಟ್‌ಶಿಲಾ ರಾಮಕೃಷ್ಣ ಮಠದಲ್ಲಿ ಉಚಿತ ಚಿಕಿತ್ಸಾಲಯ ಉದ್ಘಾಟನೆ

ಜಾರ್ಖಂಡ್ ರಾಜ್ಯದ ಘಾಟ್‌ಶಿಲಾದಲ್ಲಿರುವ ರಾಮಕೃಷ್ಣ ಮಠದಲ್ಲಿ ದಿನಾಂಕ ಏಪ್ರಿಲ್ ೨೧, ೨೦೧೫ರ ಅಕ್ಷಯ ತೃತೀಯಾ ದಿನದಂದು ಉಚಿತ ಚಿಕಿತ್ಸಾಲಯದ ಉದ್ಘಾಟನೆ ನಡೆಯಿತು. ಈ ಪ್ರಯುಕ್ತ ದೇವಾಲಯದಲ್ಲಿ ವಿಶೇಷ ಪೂಜೆ, ಹೋಮಗಳನ್ನು ಆಯೋಜಿಸಲಾಗಿತ್ತು. ಪೂಜ್ಯ ಸ್ವಾಮಿ ಬೋಧಸಾರಾನಂದಜಿ ಮಹಾರಾಜ್ ಅವರು ಚಿಕಿತ್ಸಾಲಯವನ್ನು ಉದ್ಘಾಟಿಸಿದರು.

೧೯೩೫ ರಲ್ಲಿ 'ರಾಮಕೃಷ್ಣ - ವಿವೇಕಾನಂದ ಆಶ್ರಮ' ಎಂಬ ಹೆಸರಿನಲ್ಲಿ ಆರಂಭಗೊಂಡ ಕೇಂದ್ರವು ಹಲವು ವರ್ಷಗಳಿಂದ ವಿವಿಧ ಆಧ್ಯಾತ್ಮಿಕ ಹಾಗೂ ಸೇವಾಕಾರ್ಯಗಳಲ್ಲಿ ತೊಡಗಿಕೊಂಡಿದ್ದು, ೨೦೦೪ರಲ್ಲಿ ರಾಮಕೃಷ್ಣ ಮಹಾಸಂಘದ ಶಾಖಾಕೇಂದ್ರವಾಗಿ 'ರಾಮಕೃಷ್ಣ ಮಠ' ಎಂದು ಮರುನಾಮಕರಣಗೊಂಡಿತು.

ಈ ಮಠದಲ್ಲಿ ನಿತ್ಯಪೂಜೆ, ಭಜನೆ, ಸಾಪ್ತಾಹಿಕ ಧಾರ್ಮಿಕ ಪ್ರವಚನ ಹಾಗೂ ವಿಶೇಷ ಕಾರ್ಯಕ್ರಮಗಳು ನಡೆಯುತ್ತವೆ. ಇದಲ್ಲದೆ ಉಚಿತ ಚಿಕಿತ್ಸೆ ನೀಡುವ ಅಲೋಪಥಿಕ್ ಹಾಗೂ ಹೋಮಿಯೋಪಥಿಕ್ ಚಿಕಿತ್ಸಾಲಯ, ವಿದ್ಯಾರ್ಥಿಗಳಿಗೆ ತರಬೇತಿ ಕೇಂದ್ರ , ಬಡ ಜನತೆಗೆ ಅಗತ್ಯ ಸಲಕರಣೆಗಳ ಪೂರೈಕೆ, ಸಂಚಾರಿ ಚಿಕಿತ್ಸಾಲಯ, ಉಚಿತ ನೇತ್ರ ತಪಾಸಣೆ ಹಾಗೂ ಚಿಕಿತ್ಸೆ ಮೊದಲಾದ ಸೇವಾಕಾರ್ಯಗಳು ಇಲ್ಲಿ ನಡೆಯುತ್ತಿವೆ.







ಘಾಟ್‌ಶಿಲಾ ರಾಮಕೃಷ್ಣ ಮಠ
ಹಾಗೂ ಅದರ ಚಟುವಟಿಕೆಗಳು

Managing Editor : Swami Muktidananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# Mt. Kailash & Manasa Sarovar Yatra






**13 Days**

**Depr. : June 18 July 04**

## Highlights

| | | | | |
|---|---|---|---|---|
| Doctor / Nurse in the Group | Experience of over a decade | Most percentage of satisfied customers | Vegetarian Food | Homa & Pooja facilities at Manasa Sarovar |
| | Avail Rs. 30,000/- subsidy from Karnataka Govt. (Karnataka Citizens only) | Briefing Session at Bangalore | Bangalore Staff will accompany | Assistance in availing Travel Insurance |



VIVEKA PRABHA (KANNADA MONTHLY)
June 2015, Vol.16, No.06, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/ 2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore